# ಮಾನವನ ಅವತಾರ

ಪ್ರಕಾಶ : ಬುರ್ಡೇ

ಬೆಲೆ : ೮೦ ನ. ಪೈ.

ಮಕ್ಕಳ ವಿಶ್ವಕೋಶ, ಕುಮಟ

# ಪ್ರಕಾಶಕರ ಮಾತು

ಇದು ನಮ್ಮ ನೂರು ಪುಸ್ತಕಗಳ ಯೋಜನೆಯ ಒಂದು ಪುಸ್ತಕ. ಒಂದು ನೂರು ಪುಸ್ತಕಗಳಲ್ಲಿ ಮಕ್ಕಳು ತಿಳಿಯುವಂತೆ ತಿಳಿಯಾದ ಭಾಷೆಯಲ್ಲಿ, ಸಚಿತ್ರವಾಗಿ, ಸಾಮಾನ್ಯ ವಿಷಯಗಳ ಮೇಲೆ ಒಂದೊಂದು ಪುಸ್ತಕಗಳನ್ನು ಪ್ರಕಟಿಸಬೇಕೆಂದು ಈ ಪ್ರಕಟಣೆಯ ಉದ್ದೇಶ.

ಕನ್ನಡದಲ್ಲಿ ಇಂಥ ಪ್ರಯತ್ನ ತೀರ ಕಡಿಮೆ ನಡೆದಿದೆ. ಸರಕಾರ ಈ ದಿಶೆಯಲ್ಲಿ ಸರಿಯಾಗಿ ಆಸ್ಥೆವಹಿಸುತ್ತಿಲ್ಲ. ದೊಡ್ಡ ಸಂಸ್ಥೆಗಳು ಈ ಕಡೆಗೆ ಗಮನ ಹರಿಸುತ್ತಿಲ್ಲ. ಹೀಗಾಗಿ ಒಬ್ಬ ಪ್ರಕಾಶಕ ಗೆಳೆಯರನ್ನು ಕಟ್ಟಿಕೊಂಡು ಹೋರಾಡಬೇಕು.

ಕನ್ನಡದ ಜನ ಸಹಕಾರವಿತ್ತರೆ ಈ ಯೋಜನೆ ಖಂಡಿತ ಸಫಲವಾಗುವದು. ಭಾರತದ ಎಲ್ಲ ಭಾಷೆಯಲ್ಲಿ ಈ ರೀತಿಯ ಪುಸ್ತಕಗಳು ಹೊರಡುತ್ತಿವೆ; ಕನ್ನಡದಲ್ಲಿ ಏಕೆ ಬೇಡ ಎಂದುಕೊಂಡು ನಾವು ಪ್ರಾರಂಭಿಸಿದ್ದೇವೆ. ಪಠ್ಯ ಪುಸ್ತಕಗಳನ್ನು ಗಡಿಬಿಡೀಯಲ್ಲಿ ಪ್ರಕಟಿಸುವ ಸರಕಾರ ನಮಗೆ ನೆರವು ನೀಡಿತೆಂದು ಭರವಸೆಯಿಲ್ಲದಾಗಿದೆ. ಇಂದು ನಮಗೆ ಕಿರಿಯ ಭಾವೀ ಪ್ರಜೆಗಳ ಸಹಕಾರ, ಗೆಳೆಯರ ಆಶ್ರಯ ಇವೇ ನಮಗೆ ಬೆಂಬಲ.

ಬೆಳೆಯುವ ಮಗುವಿನ ಕಣ್ಣಿಗೆ ಕಾಣುವ ಪ್ರತಿಯೊಂದೂ ಹೊಸದು. ಅವುಗಳನ್ನು ಅರಿಯುವ ಆಸೆಯಾಗುವದು ಸಹಜ. ಅವುಗಳ ಬಗ್ಗೆ ತಿಳಿವು ಹೆಚ್ಚಾದಂತೆ ಮಗುವಿನ ಜ್ಞಾನ ವಿಕಾಸವಾಗುತ್ತ ಹೋಗುತ್ತದೆ. ಮಕ್ಕಳ ಪುಸ್ತಕಗಳೆಂದರೆ ಬರೀ ದಂತ ಕಥೆಗಳ ಸಂಗ್ರಹಗಳಾಗಬಾರದು. ನೀರು, ಸಕ್ಕರೆ, ಉಪ್ಪು, ಕಾಜು, ಕಲ್ಲುಗಳು, ನದಿ, ನೆಲ, ನೆರೆಯವರು, ರೈಲು, ವಿಮಾನ, ನಕ್ಷತ್ರಗಳು ಮೊದಲಾದ ನೂರೆಂಟು ವಿಷಯಗಳನ್ನು ಮಗು ಅರಿಯಬೇಕಾದುದೇ. ಅವುಗಳನ್ನು ಮಕ್ಕಳ ಮಟ್ಟದಲ್ಲಿ ಸಾಧ್ಯವಾದಷ್ಟು ಚನ್ನಾಗಿ, ತಿಳಿಯಾಗಿ ಪುಸ್ತಕಗಳನ್ನು ಪ್ರಕಟಿಸುವಂತೆ ಯತ್ನಿಸುತ್ತೇವೆ. ಈ ನೂರು ಪುಸ್ತಕಗಳಲ್ಲಿ ಮಕ್ಕಳಿಗೆ ಒಂದು ವಿಶ್ವಕೋಶವನ್ನೇ ಪ್ರಕಟಿಸಬೇಕೆಂದು ಬಯಸುತ್ತೇವೆ. ಪ್ರಯತ್ನ ನಮ್ಮದು. ಮುಂದುವರಿಸುವದು ಓದುಗರ ಸಹಕಾರ ಸಹಾನುಭೂತಿಗಳು.

—ಪ್ರಕಾಶಕ

# ಮಾನವನ ಅವತಾರ

## 1

"ಬಹು ಹಿಂದೆ ದೊರೆಯೊಬ್ಬನಿದ್ದ. ಅವನಿಗೆ ಸುರೂಪಿಯಾದ ಮಗಳೊಬ್ಬಳಿದ್ದಳು"— — ಪ್ರತಿಯೊಬ್ಬರೂ ಇಂಥ ಕಥೆ ಕೇಳಿದ್ದಾರೆ. ಪ್ರತಿ ಮನೆಯಲ್ಲಿ ಇದ್ದ ಅಜ್ಜಿ, ರಾತ್ರಿ ಮಲಗುವಾಗ ಇಂತಹ ನೂರಾರು ಕಥೆಗಳನ್ನು ಹೇಳಿದ್ದಾಳೆ. ಆದರೆ ಈಗ ನಾನು ವಿವರಿಸುವ ಈ ಕಥೆ ಪ್ರಾರಂಭವಾದಾಗ ಯಾವ ದೊರೆಯೂ ಹುಟ್ಟಿರಲಿಲ್ಲ. ಯಾವ ರಾಜಕುಮಾರಿಯೂ ಬಾಳಿರಲಿಲ್ಲ. ಈ ಕಥೆಯ ಎದುರು ರಾಮಾಯಣ ಮಹಾಭಾರತದ ದಿನಗಳು ತೀರ ಈಚಿನವು. ಚಾಲುಕ್ಯ ಪುಲಕೇಶಿಯಂತೂ ಮೊನ್ನೆ ಮೊನ್ನಿನವ.

ಈ ಕಥೆ—ಮಾನವ ಜನಾಂಗದ ಕಥೆ. ಇದನ್ನು ಹೇಳುವಾಗ ಭೂಮಿಯ ಬಗ್ಗೆ ಕೊಂಚ ಹೇಳಬೇಕಾಗುತ್ತದೆ. ನಾವು ಹುಟ್ಟಿ ಬೆಳೆದು ಬಾಳುತ್ತಿರುವ ಈ ಭೂಮಿ ಒಂದು ಕಾಲದಲ್ಲಿ ಇದ್ದೇ ಇರಲಿಲ್ಲ. ನಮ್ಮ ತಲೆಯ ಮೇಲೆ ಕಾಣುವ ಸೂರ್ಯ ನಕ್ಷತ್ರಗಳು ಬಹುಕಾಲದಿಂದಲೂ ಇದ್ದವು. ಸೂರ್ಯ ಕಾದು ಕುದಿಯುವ ಒಂದು ಬೃಹತ್ ಗೋಲ ಬಹುವೇಗವಾಗಿ ತನ್ನ ಸುತ್ತು ತಿರಗುತ್ತ ಯಾವದೋ ಒಂದು ವಿಶಿಷ್ಟ ಗತಿಯಲ್ಲಿ ಚಲಿಸುತ್ತಿತ್ತು, ಚಲಿಸುತ್ತಿದೆ. (ಬಹುಶಃ ಎಲ್ಲ ನಕ್ಷತ್ರಗಳೂ ಹೀಗೆಯೇ ಇರಬೇಕು) ಒಮ್ಮೆ ಸೂರ್ಯನಲ್ಲಿ ಭಯಂಕರವಾಗಿ ಅಲ್ಲೋಲ ಕಲ್ಲೋಲ ಉಂಟಾಗಿರಬೇಕು. ಅಥವಾ ಹಠಾತ್ತಾಗಿ ನಕ್ಷತ್ರವೊಂದು ಸೂರ್ಯನನ್ನು ಅಪ್ಪಳಿಸಿರಬೇಕು. ಸೂರ್ಯನ ಒಂದು ಭಾಗ ಸಿಡಿದು ಹೋಯಿತು. ಸಿಡಿದ ಭಾಗ ಸೂರ್ಯನ ಆಕರ್ಷಣ ಶಕ್ತಿಯನ್ನು ದಾಟಿ

ದೂರ ಹೋಗಲಾಗಲಿಲ್ಲ. ಅವೆಲ್ಲವೂ ಕೊಂಚ ಅಂತರದಲ್ಲಿ ವೇಗವಾಗಿ ತಿರುಗತೊಡಗಿದವು. ಹಾಗೆ ಸಿಡಿದ ಭಾಗಗಳಲ್ಲಿ ಪೃಥ್ವಿಯೂ ಒಂದು. ಈ ಘಟನೆ ನಡೆದದು ಸುಮಾರು 200 ಕೋಟಿ ವರ್ಷಗಳ ಹಿಂದೆ ಎಂದು ಪಂಡಿತರು ಅಂದಾಜು ಹಾಕಿದ್ದಾರೆ.

ಭೂಮಿ ಸೂರ್ಯನಿಂದ ಸಿಡಿದುಬಂದಾಗ ಸೂರ್ಯನಂತೆ ಇತ್ತು. ಜಾಜ್ವಲ್ಯಮಾನವಾಗಿತ್ತು. ಕುದಿಯುತಿತ್ತು. ಸೂರ್ಯನಂತೆ ಗರಗರನೆ ತಿರುಗುತಿತ್ತು. ಹೀಗಾಗಿ ಅದು ದುಂಡಗಾಯಿತು.

ಕಾದು ಕೆಂಪಗೆ ಕುದಿಯುತ್ತಿದ್ದ ಭೂಮಿ ಇಂದಿನ ಸ್ಥಿತಿಗೆ ಬರಲು ತುಂಬ ಸಮಯ ಹಿಡಿಯಿತು. ಲಕ್ಷಾಂತರ ವರ್ಷಗಳು ಕಳೆದವು. ಒಂದು ದಿನ ಮಳೆ ಹಿಡಿಯಿತು. ಧೋ ಧೋ ಮಳೆ. ಆದರೇನು? ಕಾದ ಹಂಚಿನ ಮೇಲೆ ನೀರು ಸಿಂಪಡಿಸಿದಂತೆ ಆಯಿತು. ಬಿದ್ದ ನೀರು ಉಗಿಯಾಯಿತು. ಮೋಡಗಳಾದವು. ಮಳೆ ಸುರಿಯಿತು. ಮತ್ತೆ ಉಗಿಯಾಯಿತು. ತಿರುಗಿ ಮಳೆ, ಧಾರಾಕಾರವಾಗಿ, ಮುಸಲಧಾರೆಯಾಗಿ.




ಇದೋ ಸೂರ್ಯ ಕಾಣಿಸಿಕೊಂಡ.

ಅಂತೂ ಬಹುಸಮಯದ ನಂತರ ಒಂದು ದಿನ ಭೂಮಿ ಆರಿತು. ಹೊಗೆ ಮೋಡಗಳ ತೆರೆ ಸರಿಯಿತು. ನೀಲ ಆಕಾಶ ತೋರಿತು. ಮೋಡಗಳ ಮರೆಯಲ್ಲಿ ಸೂರ್ಯ ಕಾಣಿಸಿಕೊಂಡ.

ಜಡಿಮಳೆಯಿಂದ ನದಿಗಳುಂಟಾಗಿದ್ದವು. ತಗ್ಗುಗಳಲ್ಲಿ ನೀರು ತುಂಬಿ ಕೆರೆ ಸರೋವರಗಳುಂಟಾಗಿದ್ದವು. ಸಮುದ್ರಗಳು ಭೋರ್ಗರೆಯುತ್ತಿದ್ದವು.

ಈ ಸಂಗತಿ ನಡೆದಾಗ ಇದನ್ನು ನೋಡುವದಕ್ಕೆ ಯಾರಿದ್ದರು? ಮನುಷ್ಯರು ಹೋಗಲಿ, ಕಬ್ಬಿಣಕ್ಕಿಂತ ಕಠಿಣವಾದ ವಸ್ತುವಿದ್ದರೂ ಕರಗಿ ಹೋಗುತ್ತಿದ್ದ ಕಾಲವದು. ಅಂಥ ಕಾಲದಲ್ಲಿ ಜನರಿರುವದುಂಟೇ? ಪಂಡಿತರು ಈ ಕುರಿತು ತುಂಬ ಯೋಚಿಸಿದ್ದಾರೆ. ಗಣಿತ ಹಾಕಿದ್ದಾರೆ. ಕೆಲವು ನಿರ್ಣಯಕ್ಕೆ ಬಂದಿದ್ದಾರೆ.

ಈ ಭೂಮಿಯ ಬಗ್ಗೆ ಕೆಲವು ಸಂಗತಿಗಳನ್ನು ಇಲ್ಲಿ ಹೇಳಲೇಬೇಕು. ಭೂಮಿ ಸೂರ್ಯನಿಂದ 93,000,000 ಮೈಲು ದೂರದಲ್ಲಿದೆ. 67,000 ಮೈಲು ವೇಗದಲ್ಲಿ ಸೂರ್ಯನ ಸುತ್ತಲೂ ವಿಶಿಷ್ಟ ಗತಿಯಲ್ಲಿ ಮೊಟ್ಟೆಯ ಆಕಾರದಲ್ಲಿ ಚಲಿಸುತ್ತ ತನ್ನ ಸುತ್ತಲೂ ತಿರುಗುತ್ತದೆ.

ಹೂವಿನ ಆಯುಸ್ಸನ್ನು ನಾವು ದಿನಗಳಲ್ಲಿ ಎಣಿಸುತ್ತೇವೆ. ಮನುಷ್ಯನ ಆಯುಸ್ಸನ್ನು ನಾವು ವರ್ಷಗಳಲ್ಲಿ ಎಣಿಸುತ್ತೇವೆ. ಮನುಷ್ಯ ಅತಿ ಹೆಚ್ಚೆಂದರೆ 100 ವರ್ಷ ಬದುಕುತ್ತಾನೆ. ಭೂಮಿ ನಕ್ಷತ್ರಗಳು, ಸೂರ್ಯನನ್ನು ಕುರಿತು ಯೋಚಿಸುವಾಗ ನಾವು ಕೋಟಿ ಕೋಟಿ ವರ್ಷಗಳಲ್ಲಿ ಲೆಕ್ಕ ಹಾಕಬೇಕಾಗುತ್ತದೆ. ಕೋಟಿ ಕೋಟಿ ಮೈಲುಗಳಲ್ಲಿ ಅಳೆಯಬೇಕಾಗುತ್ತದೆ.

ಭೂಮಿಯ ವಯಸ್ಸನ್ನು ಅಳೆಯುವದು ಸುಲಭದ ಮಾತಲ್ಲ. ಪಂಡಿತರು ಬಹು ವಿಧಾನಗಳನ್ನು ಅನುಸರಿಸಿ ಈ ಬಗೆಗೆ ಕೆಲವು

ನಿರ್ಣಯಗಳಿಗೆ ಬಂದಿದ್ದಾರೆ.

ಸಮುದ್ರದ ನೀರು ಉಪ್ಪುಪ್ಪು. ಪ್ರಾರಂಭದಲ್ಲಿ ಇದು ಹೀಗಿರಲಿಲ್ಲ. ನದಿಗಳ ನೀರಿನಂತೆ ಇದು ರುಚಿಕಟ್ಟಾಗಿತ್ತು. ಮೊದಲು ಇದನ್ನು ಪಂಡಿತರು ಸ್ಪಷ್ಟಮಾಡಿಕೊಂಡರು. ಈಗ ಸೇರಿದ ಉಪ್ಪು ಸಮುದ್ರದಲ್ಲಿ ಸೇರಲು ಎಷ್ಟು ಸಮಯ ಹಿಡಿದಿರಬಹುದು ಎಂದು ಲೆಕ್ಕ ಹಾಕಿದರು. ಇನ್ನು ಹಲವು ವಿಧಾನಗಳನ್ನು ಅನುಸರಿಸಿದರು. ಕಲ್ಲು ಬಂಡೆಗಳನ್ನು ಪರಿಶೀಲಿಸಿದರು. ಮಣ್ಣಿನ ಥರಗಳನ್ನು ಪರೀಕ್ಷಿಸಿದರು. ಜ್ವಾಲಾಮುಖಿಗಳಿಂದ ಸಿಡಿದು ಬಂದ ವಿವಿಧ ವಸ್ತುಗಳನ್ನು ಆರಿಸಿಕೊಂಡರು. ಇದೇ ರೀತಿ ಇನ್ನು ಕೆಲವು ವಿಧದಿಂದ ಭೂಮಿಯ ಬಗೆಗೆ ಕೆಲವು ನಿರ್ಣಯಕ್ಕೆಬಂದರು.

ಭೂಮಿ ಹುಟ್ಟಿದ ನಂತರ ಲಕ್ಷಾಂತರ ವರ್ಷಗಳವರೆಗೆ ಇದರ ಮೇಲೆ ಯಾವ ಜೀವಿಯೂ ಇದ್ದಿರಲಿಲ್ಲ. ಕೊನೆಗೊಂದುದಿನ ಭೂಮಿ ವರ್ತಮಾನದ ಕಡೆಗೆ ಹೆಜ್ಜೆಹಾಕಿತು. ಪ್ರಾಣಿಹೀನಯುಗ ಅಂತ್ಯವಾಯಿತು. ಸಸ್ಯಶಾಸ್ತ್ರದಲ್ಲಿ ಅತಿಪ್ರಾಚೀನವಾದ, ಅತಿಸುಲಭವಾದ ಅಲಗಿ ಎಂಬ ಜಾತಿಯ ಸಸ್ಯವೊಂದು ತಲೆ ಎತ್ತಿತು. ಮುಂದೆ ಒಂದೊಂದು ಲಕ್ಷ ವರ್ಷಗಳಲ್ಲಿ ಒಂದೊಂದೇ ಜಾತಿಯ ಸಸ್ಯ ಹುಟ್ಟಿತು.

ಮತ್ತೊಂದುದಿನ ಮಳೆ ಇಲ್ಲದಾಗ, ಅತಿ ಚಳಿ ಇಲ್ಲದಾಗ ಭೂಮಿಯ ಮೇಲೆ ಮೊದಲನೆಯ ಜೀವಿಯೊಂದು ಹುಟ್ಟಿತು. ಬಹುಶಃ ಇದು ಹುಟ್ಟಿದ್ದು ಸಮುದ್ರ ತೀರದಲ್ಲಿರಬೇಕು. ಅಥವಾ ನದಿಯ ತೀರದಲ್ಲಿರಬೇಕು. ಅಂತೂ ಅದೊಂದು ಕೊಳಚೆಪ್ರದೇಶ. ಮೊದಲು ಹುಟ್ಟಿದ ಈ ಜಿವಸಸ್ಯವೂ ಅಲ್ಲ, ಜೀವಿಯೂ ಅಲ್ಲ, ಎನ್ನುವಂತಿತ್ತು. ಮುಂದೆ ಅದು ಮಾರ್ಪಾಡಾಗುತ್ತ ಬಂದು ಜೀವಿಗಳ ಗುಂಪಿಗೆ ಸೇರಿತು.

ದೇವರಲ್ಲಿ ನಂಬಿಕೆ ಇದ್ದವರು, " ಬ್ರಹ್ಮ, ಸೃಷ್ಟಿಕರ್ತ. ಈ ಜೀವಿ ಸಸ್ಯಗಳ ಉತ್ಪಾದನೆಗೆ ಅವನೇ ಕಾರಣ " ಎನ್ನುತ್ತಾರೆ. " ಅಖಿಲಾಂಡ

ಕೋಟಿ ಬ್ರಂಹ್ಮಾಂಡ ನಾಯಕ " ಎಂದು ಗೌರವದಿಂದ ಹೊಗಳುತ್ತಾರೆ. ಆದರೆ ವಿಜ್ಞಾನಿಗಳು ಇದನ್ನು ಒಪ್ಪುವರೆ ?

ಇಲ್ಲಿ ಒಂದು ಮಹತ್ವದ ಸಂಗತಿಯನ್ನು ಗಮನಿಸಬೇಕಾದದ್ದು ಅವಶ್ಯವಾಗಿದೆ. ಜೀವಿ, ಎಂದರೇನು ? ಸಸ್ಯವೆಂದರೇನು ? ಜೀವಿ, ಸಸ್ಯಗಳಲ್ಲಿ ಇರುವ ಅಂತರವೇನು? ಎಂಬುದನ್ನು ನಾವು ಮೊದಲು ಸ್ಪಷ್ಟ ಪಡಿಸಿಕೊಳ್ಳಬೇಕು. ಜೀವಿ ಎಂದರೆ ಕಣ್ಣು, ಮೂಗು, ಕಿವಿ, ಕೈಕಾಲು ಗಳು ಇರಲೇಬೇಕೆಂದು ನಿಯಮವಿಲ್ಲ. ಜೀವಿ ಎಂದರೆ ಉಸಿರಾಡಿಸಿ ಜೀವಿಸಿ ಇರುವ ವಸ್ತು. ಇದು ಬೆಳೆಯಬಲ್ಲದು, ಚಲಿಸಬಲ್ಲದು. ಸಸ್ಯವೆಂದರೆ ಜೀವಿಯಂತೆ ಉಸಿರಾಡಿಸಲಾರದು. ಆದರೆ ಬೆಳೆಯಬಲ್ಲದು. ಚಲಿಸ ಲಾರದು.

ಸಸ್ಯಗಳು, ಜೀವಿಗಳು ಆಹಾರ ಸೇವಿಸುತ್ತವೆ. ತಮ್ಮ ಕುಲವನ್ನು ಬೆಳೆಸುತ್ತವೆ. ನಿಮ್ಮ ಮನೆಯಲ್ಲಿರುವ ಮಾವಿನ ಗಿಡಕ್ಕೆ ನೂರಾರು ಕಾಯಿ ಗಳಾಗುತ್ತವೆ. ಅವು ಹಣ್ಣಾಗುತ್ತವೆ. ಹಣ್ಣನ್ನು ತಿಂದು ಗೊರಟೆಯನ್ನು ನಾವು ಎಸೆಯುತ್ತೇವೆ. ಮಳೆಗಾಲದಲ್ಲಿ ಗೊರಟೆ ಚಿಗಿತದ್ದು ಕಾಣುತ್ತದೆ. ಮಾವಿನ ಮರದ ವಂಶ ಹೀಗೆ ಬೆಳೆಯುತ್ತದೆ. ಎಲ್ಲ ಸಸ್ಯಗಳೂ ಹೀಗೆಯೇ. ಜೀವಿಗಳ ವಿಷಯವೂ ಕೂಡ ಇದೇ ರೀತಿ. ನಾಯಿ ಒಂದೇ ಸಲ ನಾಲ್ಕೈದು ಮರಿ ಹಾಕುತ್ತದೆ. ಹೇಟೆ ತತ್ತಿ ಇಡುತ್ತದೆ. ಆಕಳು ಕರು ಹಾಕಿ ತನ್ನ ಕುಲ ಬೆಳೆಸುತ್ತದೆ.

ಪೃಥ್ವಿಯ ಆದಿಪ್ರಾಣಿ ' ಅಮೀಬಾ.' ಇದು ಚಲಿಸಬಲ್ಲದು. ವಂಶವೃದ್ಧಿ ಮಾಡಬಲ್ಲದು. ಇದರ ಚಲಿಸುವಿಕೆ ವಂಶವೃದ್ಧಿ, ಆಹಾರ ಸೇವನೆ, ಬರಿಗಣ್ಣಿಗೆ ಕಾಣುವದಿಲ್ಲ. ಇದನ್ನು ನೋಡಲು ಸೂಕ್ಷ್ಮದರ್ಶಕ ಯಂತ್ರಬೇಕು.

' ಅಮೀಬಾ 'ದ ವಂಶ ಬೆಳಿಸುವ ಕ್ರಿಯೆ ಬಹು ಮೋಜಿನದಾಗಿದೆ. ಅದು ಬೆಳೆಯುತ್ತಹೋಗಿ ಒಂದು ಸ್ಥಿತಿಗೆ ಮುಟ್ಟುತ್ತದೆ. ತನ್ನಿಂದ

ತಾನೇ ಒಂದು ಇದ್ದದ್ದು ವಿಭಾಗವಾಗಿ ಎರಡು ಆಗುತ್ತದೆ. ಎರಡು ನಾಲ್ಕಾಗಿ, ನಾಲ್ಕು ಎಂಟಾಗಿ ವೃದ್ಧಿಯಾಗುತ್ತ ಹೋಗುತ್ತದೆ. ಇದಕ್ಕೆ "ವಿಭಜನೆ," ಎಂದು ಹೆಸರು.



ಅಮೀಬಾ ವೃದ್ಧಿಯಾಗುತ್ತಿದೆ.

'ಅಮೀಬಾ' ಒಂದು ಕ್ಷುದ್ರ ಕೀಟವಾದರೂ ಅದು ಶ್ರೇಷ್ಠ ವಾದುದು. ಅಲಗಿ ಚಲಿಸಲಾರದು. ಇದ್ದಲ್ಲಿಯೇ ಇರುತ್ತದೆ. ಆದರೆ ಅಮೀಬಾ ಸ್ವತಂತ್ರ ರೀತಿಯಿಂದ ಚಲಿಸಬಲ್ಲದು.

ಪೃಥ್ವಿಯ ಅಸಂಖ್ಯ ಪ್ರಾಣಿ ಕೋಟಿಗಳಲ್ಲಿ ಮೊದಲ ಪ್ರಾಣಿ ಹುಟ್ಟಿದ ನಂತರ ಅನೇಕ ಶತಮಾನಗಳ ತರುವಾಯ ಶ್ರೇಷ್ಠವಾದ ಇನ್ನೂ ಅನೇಕ ಪ್ರಾಣಿಗಳು ಹುಟ್ಟಿದವು. ಅಲ್ಲಿಂದಿತನಕ ಅಮೀಬಾ ಪ್ರಾಣಿ ಕೋಟಿಯ ಪಿತಾಮಹನಾಗಿ ಮೆರೆಯಿತು.

ಅಮೀಬಾ ಈ ಜಗತ್ತಿನ ಆದಿಪ್ರಾಣಿ ಎಂದು ತಿಳಿದದ್ದು ಆಧಾರಗಳಿಂದ. ಬರಿ ಊಹೆಯಿಂದಲ್ಲ. ವೈಜ್ಞಾನಿಕರು ಕಲ್ಲುಬಂಡೆಗಳಲ್ಲಿಯ ಹಿಂದಿನ ಕುರುಹುಗಳಲ್ಲಿ ಅಮೀಬಾ ಅಲಗಿಗಳ ಕುರುಹುಗಳನ್ನು ಗುರ್ತಿಸಿದ್ದಾರೆ.

'ಅಮೀಬಾ' ತನ್ನ ವಿಭಜನೆಯಿಂದ ತನ್ನ ವಂಶ ಕಾದುಕೊಂಡಿತು. ಆದುದರಿಂದ ಅದು ಅಮರವಾಯಿತು. ಆದರೆ ಇವುಗಳಿಗೆ ಕೆಲವೇ ದಿನಗಳಲ್ಲಿ ಅಪಮೃತ್ಯು ಬರತೊಡಗಿತು. ಈ ಪಿತಾಮಹನನ್ನು

ಕೊಂದು ತಿನ್ನುವ ಅನೇಕ ಪ್ರಾಣಿಗಳು ಮುಂದಿನ ಅನೇಕ ಶತಮಾನಗಳ ನಂತರ ಹುಟ್ಟಿಕೊಂಡವು.

ಏನೇ ಇರಲಿ, ಎಷ್ಟೇ ಕ್ಷುದ್ರ ಜೀವಿಯಾಗಿರಲಿ, ಅಮೀಬಾಕ್ಕೆ ಜಗತ್ತಿನ ಜೀವಿಗಳಲ್ಲಿ ಮೊಟ್ಟಮೊದಲನೆಯದಾಗಿ ತಲೆಯೆತ್ತಿದ ಪ್ರಾಣಿ ಯಾದುದರಿಂದ ಪ್ರಥಮಸ್ಥಾನ ದೊರೆಯಲೇಬೇಕು. ಪ್ರಾಣಿಕೋಟಿಯ ಪಿತಾಮಹನೆಂದು ಹೆಸರು ದೊರೆಯಲೇಬೇಕು.

## 2

'ಅಮೀಬಾ' ಏಕಕೋಶೀಯ ಪ್ರಾಣಿ. ಅದೇ ಯುಗದ ಕೊನೆಗೆ ಬಹು ಕೋಶಗಳ ಪ್ರಾಣಿಗಳು ಹುಟ್ಟಿದವು. ಇವು ಎಂದು ಹುಟ್ಟಿದವು, ಹೇಗೆ ಹುಟ್ಟಿದವು, ಎಂಬುವರ ಬಗ್ಗೆ ನಿಶ್ಚಿತವಾಗಿ ಏನನ್ನೂ ಹೇಳಲು ಬಾರದು. 'ಅಮೀಬಾ' ವಂಶವೃದ್ಧಿಗಾಗಿ ತನ್ನನ್ನೇ ತಾನು ವಿಭಾಗಿಸಿ ಕೊಂಡಿತು. ವಿಭಾಗಿಸಲ್ಪಟ್ಟ ತುಂಡುಗಳು ಅನೇಕ ಬಾರಿ ಬೇರೆ ಯಾಗದೇ ಒಂದೆಡೆಯಲ್ಲಿಯೇ ಉಳಿದುಕೊಂಡವು. ಮುಂದೆ ಅವು ಬಹು ಕೋಶಗಳುಳ್ಳ ಪ್ರಾಣಿಗಳಾದವು. ಹೀಗೆ ಅದೆಷ್ಟೋ ಪ್ರಾಣಿಗಳ ಉದಯ ವಾಯಿತು. ಅದೆಷ್ಟೋ ಪ್ರಾಣಿಗಳ ನಾಶವಾಯಿತು. ಕಾಲಕ್ಕೆ ತಕ್ಕಂತೆ, ಭೂಮಿಗೆ ತಕ್ಕಂತೆ, ಒಂದೊಂದು ಜಾತಿಯ ಪ್ರಾಣಿಯಲ್ಲಿ ಒಂದೊಂದು ರೀತಿಯ ವೈವಿಧ್ಯತೆ ತೋರತೊಡಗಿತು.

ಅತಿ ಚಳಿಯ ಪ್ರದೇಶದ ಪ್ರಾಣಿಗಳನ್ನು ಕಂಡಿದ್ದೀರಾ ? ಚಿತ್ರ ಗಳಲ್ಲಾದರೂ ನೋಡಿದ್ದೀರಾ ? ಈ ಪ್ರಾಣಿಯ ಮೈಮೇಲೆಲ್ಲ ಕೂದಲು. ಮುಖದ ಮೇಲೂ ಕೂದಲು. ಉದಾಹರಣೆ ಹಿಮಕರಡಿ. ಇದ್ದ ಕೂದ ಲೆಲ್ಲ ಬಿಳಿದು. ಇದರಿಂದ ಅದಕ್ಕೆ ಚಳಿಯಿಂದ ರಕ್ಷಣೆ. ಹಾಗೆ ಬೇರೆ ಪ್ರಾಣಿಗಳಿಂದಲೂ ರಕ್ಷಣೆ. ಈ ಪ್ರಾಣಿ ಅತಿ ಉಷ್ಣಪ್ರದೇಶದಲ್ಲಿ ಇರ ಲಾರದು. ಉಳಿದ ಪ್ರಾಣಿಗಳೂ ಹಾಗೆಯೇ.

ನೈಸರ್ಗಿಕ ಕಾರಣಗಳಿಂದಾಗಿ ಪ್ರಾಣಿಗಳ ರೂಪ ಆಕಾರ ಬದಲಾಯಿತು. ಕಠಿಣ ಪರಿಸ್ಥಿತಿಯಲ್ಲಿಯೂ ಕವಚ ನೈಸರ್ಗಿಕ ರಕ್ಷಣೆ ತನ್ನಿಂದ ತಾನೇ ಅವುಗಳಿಗೆ ಒದಗಿತು.

ಸಮುದ್ರದಲ್ಲಿ ಜೀವಿಗಳು ಹುಟ್ಟಿದವು. ಪ್ರವಾಹದ ಜೊತೆಗೆ ತಾವು ಹರಿದು ನೀರಿಲ್ಲದ ಕಡೆ ಹೋಗುವ ಅಂಜಿಕೆ ಅವುಗಳಿಗೆ. ಹಾಗೇ ಹೋಗಿ ಸಾವು ಬರಬಹುದೆಂದು ಭಯ ಬೇರೆ. ಈ ಅಂಜಿಕೆಯಿಂದ ನೀರಿನ ಹೊರಗೂ ಬದುಕಬೇಕೆಂದು ಕೆಲವಕ್ಕೆ ಆಸೆಯಾಯಿತು. ಪರಿಸ್ಥಿತಿಗಳೂ ಹಾಗೆಯೇ ಬಂದೊದಗಿದವು.

ಒಂದು ಜಲಚರ ಪ್ರಾಣಿ. ಅದು ಹೇಗೋ ಸಮುದ್ರದಿಂದ ಹೊರ ಬಂದು ದಂಡೆಯ ಮೇಲೆ ಕುಳಿತಿತ್ತು. ಅದರ ಶರೀರ ರಚನೆ ಶ್ವಾಸೋಚ್ಛ್ವಾಸ ಕ್ರಿಯೆ ಎಲ್ಲ ನೀರಿನಲ್ಲಿಯ ಪ್ರಾಣಿಗಳಂತೆಯೇ ಇತ್ತು. ಅದು ಎರಡುಕ್ಷಣ ದಂಡೆಯ ಮೇಲೆ ಕುಳಿತು ಸಾಯುವ ಗಳಿಗೆ ಬಂದ ಕೂಡಲೇ ನೀರಿನಲ್ಲಿ ಹಾರಿ ಬದುಕಿಕೊಂಡಿತು. ಮುಂದೆ ಅದೇ ಇದಕ್ಕೆ ಆಟವಾಯಿತು, ಅಭ್ಯಾಸವಾಯಿತು. ನಂತರ ಕೆಲವು ಶತಮಾನಗಳು ಕಳೆದವು. ಆ ಪ್ರಾಣಿಗಳ ದೇಹ ರಚನೆಯಲ್ಲಿ ನಿಧಾನವಾಗಿ ಬದಲಾವಣೆಗಳುಂಟಾದವು. ನೀರಿನಲ್ಲಿಯೂ ನೆಲದ ಮೇಲೂ ಬದುಕುವದು ಅದಕ್ಕೆ ಸಾಧ್ಯವಾಯಿತು.

ಹೀಗೆ ಒಂದಲ್ಲ ಎರಡಲ್ಲ, ಸಾವಿರಾರು ಪ್ರಾಣಿಗಳ ದೇಹರಚನೆ ಬದಲಾದವು. ಸಾವಿರಾರು ವರ್ಷ ಈ ಕ್ರಿಯೆ ನಡೆದೇ ನಡೆಯಿತು. ನೆಲದ ಮೇಲೆ ವಾಸಿಸುವವಕ್ಕೆ ತಕ್ಕುದಾದ ಶರೀರದ ರಚನೆ ಉಂಟಾದೊಡನೆ ಕೆಲವು ಪ್ರಾಣಿಗಳು ನೀರಿನಲ್ಲಿ ಮರಳಿಹೋಗುವದನ್ನು ಮರೆತವು. ಭೂಮಿಯಮೇಲೆ ಆಹಾರ ಹುಡುಕತೊಡಗಿದವು. ಭೂಮಿಯ ಮೇಲೆ ಬದುಕಿ ಬಾಳತೊಡಗಿದವು.

ಮೇಲೆ ಹೇಳಿದ್ದು ಪ್ರಾಣಿಗಳ ರೂಪಾಂತರದ ಒಂದು ಸ್ವರೂಪ ಮಾತ್ರ. ಇದೇ ರೀತಿ ಅನೇಕ ರೂಪಾಂತರಗಳ, ಪರಿವರ್ತನೆಗಳ ಪ್ರಯೋಗಗಳನ್ನು ನಿಸರ್ಗ ನಡೆಸಿತು. ಎಷ್ಟೋ ಪ್ರಯೋಗಗಳು ಯಶಸ್ವಿಯಾದವು. ಇವು ಒಂದೆರಡು ವರ್ಷಗಳಲ್ಲಿ ಮುಗಿಯುವ ಪ್ರಯೋಗಗಳಲ್ಲ. ಯುಗ ಯುಗಾಂತರ ಕಳೆದರೂ ಮುಗಿಯದ ಪ್ರಯೋಗಗಳು. ಪ್ರಾಣಿಕೋಟಿ, ಸಸ್ಯಕೋಟಿ, ನಿಸರ್ಗದ ಪ್ರಯೋಗಮಾಲಿಗಳಿಗೆ ತುತ್ತಾಗಿ ಇಂದಿನ ಈ ಸ್ಥಿತಿಗೆ ಬಂದು ಮುಟ್ಟಿತು. ಇದಕ್ಕೆ ವಿಜ್ಞಾನಿಗಳು 'ಪರಿವರ್ತನಕಾಲ' ಎಂದು ಕರೆದರು.

ಅಮೀಬಾ ಏಕ ಕೋಶಿ. ಜೇಡು ಜೊಂಡಿಗ ಇತ್ಯಾದಿಗಳು—ತ್ರಿಕೋಶಗಳು. ಈ ಪ್ರಾಣಿಗಳಲ್ಲಿ ಮೂರು ಅವಯವಗಳು ಒಂದಕ್ಕೊಂದು ಹೊಂದಿಕೊಂಡು ಇವುಗಳ ಶರೀರದ ರಚನೆಯಾಗಿದೆ. ಅಮೀಬಾಕ್ಕೆ ಹೋಲಿಸಿದರೆ ಇವುಗಳ ಶರೀರ ಬಹುದೊಡ್ಡದು. ಇವುಗಳ ದೇಹದ ರಚನೆ ನೆಲದ ಮೇಲೆ ಇರಲು ಉಪಯುಕ್ತವಾದವು.

ಅಲಗಿ ಹುಟ್ಟಿದ ಅನೇಕ ವರ್ಷಗಳಲ್ಲಿ ಸಮುದ್ರದಲ್ಲಿ ಸಸ್ಯಗಳ ಸಂಖ್ಯೆ ಹೆಚ್ಚುತ್ತ ನಡೆಯಿತು. ಹೊಸ ಹೊಸ ತಾಣಗಳನ್ನು ಅರಸುವಲ್ಲಿ ನಿಸರ್ಗ ಮಗ್ನವಾಯಿತು. ಮೇಲಾಗಿ ಪ್ರಾಣಿಗಳಂತೆ ಇವೂ ಕೂಡ ಪ್ರವಾಹದ ನೀರಿನೊಂದಿಗೆ ಸಿಕ್ಕ ಸಿಕ್ಕ ದಿಕ್ಕುಗಳಲ್ಲಿ ಹರಿದು ಹೋಗುತ್ತಿದ್ದವು. ಹೆಚ್ಚು ದಿನ ಬಾಳಿಬದುಕಲು ನದಿಯ ದಂಡೆಯಮೇಲೂ ಸಮುದ್ರದ ತೀರದ ಮೇಲೂ ಬದುಕಲು ಅಭ್ಯಾಸ ಮಾಡಿಕೊಂಡವು. ದಿನಕ್ಕೆರಡುಸಾರೆ ಸಾಗರದ ನೀರು ಏರಿ ಉಪ್ಪುನೀರಿನಿಂದ ಈ ಸಸ್ಯಗಳನ್ನು ತೋಯಿಸುತ್ತಿತ್ತು. ಈ ಅಹಿತ ವಾತಾವರಣದಲ್ಲಿ ಬೆಳೆದ ಸಸಿಗಳು ಅದೇ ವಾತಾವರಣಕ್ಕೆ ಹೊಂದಿಕೊಂಡವು. ಶತ ಶತಮಾನಗಳ ಶಿಕ್ಷೆಯನ್ನು ಇವು ಎದುರಿಸಿ ನಿಂತವು. ತಮ್ಮ ದೇಹ ರಚನೆಯನ್ನು ಅದಕ್ಕೆ ತಕ್ಕಂತೆ ಬದಲಿಸಿಕೊಂಡವು. ತಾವಿರುವ ಭೂಮಿಯಿಂದ ಆಹಾರವನ್ನೂ,

ನೀರನ್ನೂ ಹೀರಿಕೊಳ್ಳುವ ಅಭ್ಯಾಸ ಮಾಡಿಕೊಂಡವು. ಈ ಕಾರ್ಯ ಬೇರುಗಳಿಂದ ಸತತವಾಗಿ ನಡೆಯಿತು. ಹೀರಿಕೊಂಡ ಆಹಾರವನ್ನು ಪೂರೈಸಲು ಟೊಂಗೆಗಳು, ಸೂರ್ಯಪ್ರಕಾಶವನ್ನು ಹೀರಲು, ಎಲೆಗಳು ತಯಾರಾದವು. ಹೀಗೆ ಸಸ್ಯಗಳಲ್ಲಿ ಕೆಲಸದ ವಿಭಜನೆಯಾಯಿತು.

ಮೇಲೆ ಹೇಳಿದ ಈ ಸ್ಥಿತ್ಯಂತರ ಕಾಲಕ್ಕೆ 'ಕೇಂಬ್ರಿಯನ್ ಯುಗ'ವೆನ್ನುತ್ತಾರೆ. ಆ ಕಾಲದಲ್ಲಿ ಬದುಕಿದ ಪ್ರಾಣಿಗಳಿಗೆ ಕಣ್ಣು ಇದ್ದಂತೆ ತೋರುವದಿಲ್ಲ. ನಂತರವೇ ಅವುಗಳಿಗೆ ಕಣ್ಣು ಬಂದಿರಬೇಕು. ಆಗಿನವು ಎಂದು ಹೇಳಬಹುದಾದ ಪ್ರಾಣಿಗಳ ಅವಶೇಷಗಳು ಬಂಡೆಗಳಲ್ಲಿ ದೊರೆತಿವೆ. ಅವುಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ಈ ರೀತಿ ಭಾಸವಾಗುತ್ತದೆ. ಅದಕ್ಕೆ ವಿವರಣೆ ಈ ರೀತಿ ಕೊಡಬಹುದು.

ಭೂಮಿಯ ಮೇಲೆ ಮೊಟ್ಟಮೊದಲು ಬರೆ ಉಗಿ ದಟ್ಟವಾಗಿ ಹಬ್ಬಿಕೊಂಡಿತ್ತು. ಸೂರ್ಯನ ಕಿರಣಗಳೂ ಭೂಮಿಯನ್ನು ಸೋಂಕುತ್ತಿರಲಿಲ್ಲ. ಹೀಗಾಗಿ ಎಲ್ಲೆಲ್ಲಿಯೂ ಕತ್ತಲೆ ಗಾಢಾಂಧಕಾರ ಆವರಿಸಿತ್ತು. ಕತ್ತಲೆನಲ್ಲಿ ಕಣ್ಣಿನ ಉಪಯೋಗವೇನು ? ಹೀಗಾಗಿ ಆ ಪ್ರಾಣಿಗಳಿಗೆ ಕಣ್ಣಿನ ಆವಶ್ಯಕತೆಯೇ ಉಂಟಾಗಲಿಲ್ಲ. ಈ ಕತ್ತಲೆ ಯುಗಕ್ಕೆ 'ಕೇಂಬ್ರಿಯನ್ ಯುಗ'ವೆಂದು ಪಂಡಿತರು ಕರೆದರು. ಕ್ರಮಶಃ ಉಗಿ ಕಡಿಮೆಯಾಗತೊಡಗಿತು. ಕತ್ತಲೆ ಸರಿಯಿತು. ಸೂರ್ಯನ ಬೆಳಕು ಭೂಮಿಯನ್ನು ಬೆಳಗತೊಡಗಿತು. ಪ್ರಾಣಿಗಳಿಗೆ ಕಣ್ಣುಗಳ ಅವಶ್ಯಕತೆ ಉಂಟಾಯಿತು. ಮತ್ತೆ ಸುಮಾರು ಲಕ್ಷಾಂತರ ವರ್ಷಗಳು ಗತಿಸಿದವು. ಪ್ರಾಣಿಗಳಿಗೆ ಕಣ್ಣುಗಳು ಮೂಡಿಬಂದವು. ಜಗತ್ತಿಗೆ ಬೆಳಕಿನ ಯುಗ ಬಂದಿತು. ಈ ಬೆಳಕಿನ ಯುಗಕ್ಕೆ 'ಸಿಲೂರಿಯನ್ ಯುಗ'ವೆಂದು ವಿಜ್ಞಾನಿಗಳು ಕರೆದರು.

ಪ್ರಾಣಿಗಳ ಪರಿವರ್ತನವ ವಿಷಯದಲ್ಲಿ ಹೇಳುವಾಗ ಯಾವ ಪ್ರಾಣಿ ಮೊದಲು ಅಸ್ತಿತ್ವದಲ್ಲಿ ಬಂದಿತು. ಯಾವದು ನಂತರ ಬಂದಿತು.

ಎಂಬುದು ಯೋಚನೆಯಾಗುತ್ತದೆ. ಅಮೀಬಾದ ನಂತರ ಅಂಬಲಿಮೀನಿಗೆ (Jelly Fish) 2ನೇ ಸ್ಥಾನ ದೊರೆಯುತ್ತದೆ. ನಂತರ ಹಿಂದೆ ಹೇಳಿದ ತ್ರಿಕೋಶಿಯ ಪ್ರಾಣಿಗಳು, ಸಣ್ಣಪುಟ್ಟ ಸುಲಭವಾದ ದೇಹ ರಚನೆಯುಳ್ಳ ಮೀನುಗಳು. ಶಂಖದ ಕವಚಿಯುಳ್ಳವು, ಚಿಪ್ಪುಗಳಿದ್ದವು........ಇತ್ಯಾದಿ ಅಸ್ತಿತ್ವದಲ್ಲಿಬಂದವು.

ಮೇಲೆ ಹೇಳಿದ ಪ್ರಾಣಿಗಳೆಲ್ಲ ಅಕಶೇರುಕಗಳು. ಇವುಗಳಿಗೆ ಬೆನ್ನೆಲವುಗಳಿಲ್ಲ. ಹಾಗಾದರೆ ಪ್ರಾಣಿಗಳಿಗೆ ಎಲುವುಗಳು ಎಂದು ಉಂಟಾದವು? ಇದನ್ನು ಹೇಳುವದು ಸ್ವಲ್ಪ ಪ್ರಯಾಸದ ಕೆಲಸ. ಸಿಲೂರಿಯನ್ ಯುಗದಲ್ಲಿ ಚಿಕ್ಕ ಪುಟ್ಟ ಸುಲಭ ರಚನೆಯುಳ್ಳ ಪ್ರಾಣಿಗಳು ಬದುಕಿದ್ದವೆಂದು ತೋರುತ್ತದೆ.

## 3

ಭೂಮಿಯ ವಾತಾವರಣ ಬದಲಾಗುತ್ತಿತ್ತು. ವಾತಾವರಣ ತುಂಬ ಉಷ್ಣವಾಗಿತ್ತು. ಕೆರೆ ಸರೋವರಗಳು ಬತ್ತಿ ಹೋದವು. ನೀರಲ್ಲಿಯ ಪ್ರಾಣಿಗಳು. ನೀರು ಒಣಗಿದಾಗ ನೆಲದಮೇಲೆ ನಿಂತು ಗಾಳಿಯನ್ನು ಉಸಿರಾಡಿಸುವದಕ್ಕೆ ಯತ್ನಿಸಿದವು. ಹೊಸ ವಾತಾವರಣಕ್ಕೆ ಹೊಂದಿಕೊಂಡವು. ಇನ್ನು ಕೆಲವು ನೀರನ್ನು ಹುಡುಕಿಕೊಂಡು ಹೊರಟವು. ಹಾಗೆ ಹೋಗುವದು ಆ ಪ್ರಾಣಿಗಳಿಗೆ ಸಾಮಾನ್ಯ ಕೆಲಸವಾಗಿರಲಿಲ್ಲ. ತಮ್ಮ ದೇಹ ಎಳೆದುಕೊಂಡು ಹೋಗಬೇಕಾಗಿತ್ತು. ಹೀಗೆ ನೀರಿನಿಂದ ನೀರಿಗೆ ಅಲೆಯುವ ಈ ಪ್ರಾಣಿಗಳ ಈಜು ರೆಕ್ಕೆಗಳ ಅಸ್ಥಿಪಂಜರದ ರೆಕ್ಕೆ ಕಡ್ಡಿಗಳ ಸಂಖ್ಯೆ ಕಡಿಮೆಯಾಗುತ್ತ ಹೋಯಿತು. ಕಾಲುಗಳಾದವು. ಹೀಗೆ ನೀರಿನೊಳಗಿದ್ದ ನೆಲದಮೇಲೆ ಬಂದ ಪ್ರಾಣಿಗಳಲ್ಲಾದ ಮೊದಲ ಮಾರ್ಪಾಡನ್ನು ಈಗಲೂ ನಾವೂ ಕಪ್ಪೆಗಳಲ್ಲಿ ಕಾಣಬಹುದು.

ಇಲ್ಲಿ ಒಂದುಮಾತು ಹೇಳುವದು ಸಮಯೋಚಿತವಾದದ್ದು. ನೀರಿನಲ್ಲಿ ವಾಸಿಸುವ ಪ್ರಾಣಿಗಳು ಭೂಮಿಯ ಮೇಲೆ ಬಂದು ಕಪ್ಪೆಯಾಗಿ

ಅಲ್ಲಿಂದ ಇನ್ನೊಂದಾಗಿ ಮುಂದೆ ಮತ್ತೊಂದಾಗಿ ಹಲವು ದಿಸೆಯಲ್ಲಿ ವಿಕಾಸ ಹೊಂದಿದವು. ಸಾಮಾನ್ಯ ಕಪ್ಪೆಗಳಿಂದ ದೊಡ್ಡ ದೊಡ್ಡ ರಾಕ್ಷಸ ಕಪ್ಪೆಗಳು ಹುಟ್ಟಿದವು. ಆದರೆ ಮುದ್ರ್ಯನದ ಸಂಗತಿ ಎಂದರೆ ಅವುಗಳ ಬೆಳವಣಿಗೆ ಮತ್ತು ವಿನಾಶ ಅದೇ ಯುಗದಲ್ಲಿ ಆಯಿತು. ಈಗ ನಾವು ಕಾಣುವ ಕಪ್ಪೆಗಳ 3 ಪಟ್ಟು ದೊಡ್ಡದಾದ ಕಪ್ಪೆಗಳಿದ್ದವು ಎಂಬುದನ್ನು ಯೋಚಿಸುವದೂ ಭಯಾನಕವಾದದ್ದು. ಅವುಗಳಿಗೆ ಸರಿಯಾದ ಅವಯವಗಳು ಇದ್ದಂತೆ ತೋರುವದಿಲ್ಲ. ಆಕಾರ ದೊಡ್ಡದಿದ್ದು ಅವಕ್ಕೆ ತಕ್ಕ ಕಾಲುಗಳಿರಲಿಲ್ಲ, ತೀರ ಚಿಕ್ಕವಾಗಿದ್ದವು.

ಅನಂತರದ ಯುಗ, ಹರಿದಾಡುವ ಪ್ರಾಣಿಗಳ ಯುಗ. ಸರೀಸೃಪ



ಸರೀಸೃಪಗಳ ಒಂದು ಚಿತ್ರ.







ಕೆಲವು ಸರೀಸೃಪಗಳು ಸಸ್ಯಾಹಾರಿ; ಮೇಲಿನ ಚಿತ್ರದಲ್ಲಿ ಕಾಣಬಹುದು.
ಕೆಳಗಿದ್ದ ಪ್ರಾಣಿ ಆನೆಯನ್ನು ಹೋಲುವಪ್ರಾಣಿ.

ಗಳ ಯುಗ. ಇವುಗಳಲ್ಲಿ ಕೆಲವು ನೆಲದಮೇಲೂ ನೀರಿನಲ್ಲಿಯೂ ವಾಸಿಸುತ್ತಿದ್ದವು.

ಈ ಚಿತ್ರದಿಂದ ಇವುಗಳ ಆಕಾರದ ಸರಿಯಾದ ಕಲ್ಪನೆ ಬರುವಂತಿದೆ. ಇವು ನೀರಿನಲ್ಲಿಯೂ ನೀರ ಹೊರಗೂ ವಾಸಿಸುತ್ತಿದ್ದವು. ಮೇಲಿನದು ಬ್ರಿಂಟೋಃ ಸೋರಸ್ ಕೆಳಗಿನದು ಡಿಪ್ಲೋಡಿಕೋಸ್, ಇವುಗಳ ಬಾಲದ ಆಕಾರದಲ್ಲಿ ವೈಚಿತ್ರ್ಯತೆಯನ್ನು ಕಾಣಬಹುದು. ಇವುಗಳ ಆಕಾರ ಬಹುದೊಡ್ಡದು. 30'-40' ಫೂಟುಗಳಷ್ಟು ಉದ್ದವಾಗಿದ್ದವು. ತೂಕ ಸುಮಾರು 3500 ಮಣದಷ್ಟಿತ್ತು. ಇವುಗಳ ಹೊಟ್ಟೆ ಬಹುದೊಡ್ಡದು. ಆದರೆ ಕಾಲುಗಳು ಆ ಪ್ರಮಾಣಕ್ಕೆ ತಕ್ಕಂತೆ ಇರಲಿಲ್ಲ. ಕಾಣುವದಕ್ಕೆ ತೀರ ಅಸಹ್ಯವಾಗಿತ್ತು. [ ಕಾಂಗರೂ ಕೂಡ ಇವುಗಳಲ್ಲಿ ಒಂದು. ಇದರ ಮುಂಗಾಲು ಹಿಂದಿನ ಸರೀಸೃಪದಂತೆ ತೀರ ಚಿಕ್ಕವು. ಹಿಂಗಾಲುಗಳು ಕೊಂಚ ಉದ್ದವಾಗಿವೆ.] ಈ ಸರೀಸೃಪಗಳಲ್ಲಿ ಕೆಲ ಕೆಲವು ಮಾಂಸಾಹಾರಿಗಳಿದ್ದರೆ ಕೆಲವು ಸಸ್ಯಾಹಾರಿಗಳಿದ್ದವು.

ಈ ಸರೀಸೃಪಗಳಲ್ಲಿ ಮೊದಲು ಕೆಲವು ನೀರಿನಲ್ಲಿದ್ದು ನಂತರ ನೆಲದ ಮೇಲೆ ವಾಸಿಸಲು ಪ್ರಾರಂಭಿಸಿ ಮರಳಿ ನೀರಿಗೆ ಹೋದುದುಂಟು. ಪ್ಲಿಸಿಯೊಸೋರ, ಇಕ್ಥಿಯೊಸೋರಗಳು ಇದಕ್ಕೆ ಉದಾಹರಣೆ. ಡ್ಯಾನೊಸೋರ ಎಂಬ ಪ್ರಾಣಿ ಇದೇ ಜಾತಿಯದು. ಈಗಿನ ತಿಮಿಂಗಿಲವನ್ನು ಹೋಲುತ್ತಿತ್ತು. ಇದರಂತೆ ಅನೇಕ ಭಯಂಕರವಾದ ಪ್ರಾಣಿಗಳು ಆ ಯುಗದಲ್ಲಿ ಆಗಿ ಹೋದವು.

ಕೆಲವು ಸರೀಸೃಪಗಳು ಇನ್ನೊಂದುವಿಧದಲ್ಲಿ ತಿರುಗಾಡತೊಡಗಿದವು. ಅವುಗಳ ತೊಡೆಯ ಸ್ನಾಯುಗಳು ಬಲಗೊಂಡವು. ಅವುಗಳಲ್ಲಿ ಕೆಲವುಗಳಿಗೆ ಬಾವಲಿಗಳಿಗೆ ಇರುವಂತೆ ಕಾಲು ಹಾಗು ದೇಹದ ನಡುವೆ ಹಾರಲು ಅನುಕೂಲವಾಗುವಂತೆ ಪರದೆಗಳುಂಟಾಯಿತು.







ಬೇರೆ ಬೇರೆ ತರಹದ ಸರೀಸೃಪಗಳು. ಕೊನೆಯ ಎರಡು ಸರೀಸೃಪಗಳ ಉದ್ದಳತೆ
ಯಲ್ಲಿ ಎಲ್ಲಬಗೆಯಿಂದಲೂ, ಹಲ್ಲಿಯನ್ನು ಹೋಲುತ್ತದೆ.



ಸರೀಸೃಪಗಳು ಕಾಲಾಂತರದಲ್ಲಿ ಹಕ್ಕಿಗಳಾದವು. ಈ ಎರಡು ಪ್ರಾಣಿಗಳ
ಸರೀಸೃಪಗಳ ಅವಶೇಷಗಳಿದ್ದರೂ ರೆಕ್ಕೆಗಳನ್ನು ಕಾಣಬಹುದು.



ಇದೂ ಒಂದು ಸರೀಸೃಪ. ರೆಕ್ಕೆಗಳ ಜೊತೆಗೆ ಬಾಲ, ಕಾಲುಗಳಿವೆ.

ಕೆಲವು ಸರೀಸೃಪಗಳಂತೂ ದೊಡ್ಡದೊಡ್ಡ ಮರಗಳ ತುದಿಯಲ್ಲಿಯೇ ವಾಸಿಸಲಾರಂಭಿಸಿದವು. ಅವು ಮರಗಳನ್ನು ಸರಸರನೇ ಹತ್ತುತ್ತಿದ್ದವು. ಇಳಿಯುತ್ತಿದ್ದವು. ಜಿಗಿಯುತ್ತಿದ್ದವು. ಇವುಗಳಿಂದಲೇ ಮುಂದೆ ಪಕ್ಷಿಗಳುಂಟಾದವು. ದಕ್ಷಿಣ ಹಾಗೂ ಉತ್ತರ ಧ್ರುವ ಪ್ರದೇಶಗಳಲ್ಲಿ ಈಗಲೂ ಕೂಡ ಹಲ್ಲಿದ್ದ ಕಡಲು ಹಕ್ಕಿಗಳನ್ನು ಕಾಣಬಹುದು. ಪ್ರಾಚೀನ ಕಾಲದ ಹಕ್ಕಿಗಳಿಗೆ ಚಂಚುಗಳಿರಲಿಲ್ಲ. ಬಾಯಿ ಹಲ್ಲುಗಳಿದ್ದವು.

ಸರೀಸೃಪಗಳು ಯಾವದೇ ರೀತಿಯ ಅಡೆತಡೆಗಳಿಲ್ಲದೇ, ಕಟ್ಟುನಿಟ್ಟುಗಳಿಲ್ಲದೇ ಬೆಳೆದವು. ಆದರೆ ಇವು ಒಮ್ಮಿಂದೊಮ್ಮೆ ಪೃಥ್ವಿಯಿಂದ ಮಾಯವಾದವು. ಕಾರಣ ?— ಅದು ಸ್ಪಷ್ಟವಿಲ್ಲ. ಈ ಭೂತಾಕಾರದ ಒಂದು ಕಾಲದಲ್ಲಿ ಈ ಭೂಮಿಯನ್ನೇ ಅಲ್ಲೋಲ ಕಲ್ಲೋಲ ಮಾಡಿದ ಈ ಪೆಡಂಭೂತಗಳಿಗೆ ಒಂದು ಚಿಕ್ಕ ಕೊರತೆ ಇತ್ತು. ಭೂಮಿಯ ಮೇಲೆ ಬದಲಾವಣೆಯಾಗುವ ಉಷ್ಣತಾಮಾನವನ್ನು ಎದುರಿಸುವ ಶಕ್ತಿ ಇವುಗಳಲ್ಲಿ ಇದ್ದಿರಲಿಲ್ಲ. ಇವು ಉಷ್ಣ ಪ್ರದೇಶಗಳಲ್ಲಿ ಭರದಿಂದ ಬೆಳೆದವು. ಆದರೆ ಕೆಲವು ಕಾರಣಗಳಿಂದ ಚಳಿಗಾಲದಲ್ಲಿ ಅಲ್ಲಿ ಚಳಿ ಬಿದ್ದ ಕೂಡಲೇ ಅದನ್ನು ಈ ಪ್ರಾಣಿಗಳು ಸಹಿಸಲಾರದಾದವು. ಇವುಗಳ ಆಲಸ್ಯದಿಂದಾಗಿ ಇವುಗಳಿಗಿಂತ ಚಿಕ್ಕವು ಇವುಗಳ ಮೇಲೆ ಆಕ್ರಮಣ ಮಾಡಿದವು. ಮೊಟ್ಟೆಗಳನ್ನು ಒಡೆದು ತಿಂದು ಹಾಕಿದವು. ಅಂತೂ ಒಂದು ದಿನ ಈ ಭೂಮಿಯು ಭಯಂಕರವಾದ ಸರೀಸೃಪಗಳ ಆಳಿಕೆಯಿಂದ ಬಿಡುಗಡೆ ಹೊಂದಿತು. ಸರೀಸೃಪಗಳ ಆಳಿಕೆ ಮುಗಿದು ಇಂದಿಗೆ ಸುಮಾರು ಒಂದು ಕೋಟಿ 50 ಲಕ್ಷ ವರ್ಷಗಳು ಕಳೆದಿವೆ.

ಹೊಸಯುಗ ಬಂದಿತು. ಸಮುದ್ರಗಳಿದ್ದಲ್ಲಿ ಪರ್ವತಗಳಾದವು. ಪರ್ವತಗಳು ತಗ್ಗಿ ಸಮುದ್ರ ನುಗ್ಗಿ ಬಂದಿತು. ಆ ಯುಗದಲ್ಲಿ ಸೃಷ್ಟಿ ವೈಚಿತ್ರ್ಯಗಳು ನಡೆದೇ ನಡೆದವು. ಹಿಮಾಲಯ, ಆಲ್ಪ್ಸದಂಥ ಪರ್ವತ

ಗಳು ತಿಳಿಯುತ್ತಿದವು. ಹಿಮಾಲಯ ಇದ್ದಲ್ಲಿ ಹಿಂದೆ ಸಮುದ್ರವಿತ್ತು ಎನ್ನುವದಕ್ಕೆ ಈಗಲೂ ಅಲ್ಲಿ ಸಮುದ್ರವಲ್ಲಿಯ ಪ್ರಾಣಿಗಳ ಅವಶೇಷ ದೊರೆಯುತ್ತದೆ.

ಪ್ರಕೃತಿದೇವಿ ಒಂದೊಂದು ರೀತಿಯ ಪ್ರಾಣಿಗಳನ್ನು ಸಜ್ಜು ಗೊಳಿಸಿ ಈ ಭೂಮಿಯ ಮೇಲೆ ಬಾಳುವದಕ್ಕೆ ತಕ್ಕುದಾಗಿವೆಯೋ ಇಲ್ಲವೋ ಎಂಬುದನ್ನು ನೋಡುವದಕ್ಕೆ ಪ್ರಯೋಗಗಳನ್ನು ನಡಿಸಿದ್ದು ಕಾಣ ಬಹುದು. ಈ ದೊಡ್ಡ ದೊಡ್ಡ ಡಿನೊಸೋರಗಳಂಥ ಪೆಡಂಭೂತ ಗಳು ಬರಗಾಲದಲ್ಲಿ ಆಹಾರ ಕೊರತೆಯಾದಾಗ ಅಥವಾ ಹವಾಮಾನ ವಲ್ಲಿ ಬದಲಾವಣೆಯಾದಾಗ ನಾಶ ಹೊಂದಿದವು. ಆದರೆ ಅವುಗಳಿಂದಲೇ ವಿಕಾಸವಾದ ಚಿಕ್ಕ ಪ್ರಾಣಿಗಳು ಬದುಕಿಕೊಂಡವು. ಮುಂದೆ ಅವು ಗಳಿಂದ ಕೆಲವು ಸಸ್ತನಿ ಪ್ರಾಣಿಗಳಾಗಿ ಮಾರ್ಪಾಟ ಹೊಂದಿದವು.

ಈ ವರೆಗೆ ನಡೆದ ವಿಕಾಸಗಳಲ್ಲಿ ಪ್ರಮುಖವಾದವು ಸಸ್ತನಿ ಪ್ರಾಣಿಗಳು. ಇವುಗಳ ದೇಹದ ಮೇಲೆ ರೋಮದ ಹೊದಿಕೆ ಇದೆ. ಇವು ತಮ್ಮ ಮರಿಗಳಿಗೆ ಪ್ರೀತಿಯಿಂದ ಹಾಲುಣಿಸುತ್ತವೆ. ಎಲ್ಲ ಸಸ್ತನಿ ಗಳೂ ಮರಿ ಹಾಕುತ್ತವೆ. ಈ ಪ್ರಾಣಿಗಳು ಹೆಚ್ಚು ದೊಡ್ಡದಾಗಿದ್ದವು. ಕೆಲವು ಇಲಿ ಅಥವಾ ಮೊಲದಷ್ಟು ಗಾತ್ರವಿದ್ದು ಎಲ್ಲ ಗಂಡಾಂತರ ಗಳಿಂದಲೂ ಬದುಕಿ ಉಳಿದವು. ಅಂದಿನ ದೊಡ್ಡ ದೊಡ್ಡ ಮಾಂಸಾಹಾರಿ ಸರೀಸೃಪಗಳ ದೃಷ್ಟಿಗೆ ಬೀಳದಂತೆ ಅಡಗಿಕೊಂಡು ಜೀವಿಸಿದವು. ಗಡ್ಡೆ, ಎಲೆಗಳನ್ನು ತಿಂದು ಬದುಕಬಲ್ಲ ಶಕ್ತಿ ಅವಕ್ಕಿತ್ತು. ಸರೀ ಸೃಪದ ಮೊಟ್ಟೆಗಳನ್ನು ತಿಂದುಹಾಕಿ ಅವುಗಳ ಸಂತತಿಯನ್ನೇ ನಿರ್ನಾಮ ಮಾಡಿದವು. ಸಸ್ತನ ಪ್ರಾಣಿಗಳ ಮರಿಗಳು ತಂದೆ ತಾಯಿ ಯನ್ನೇ ಹೋಲುತ್ತಿದ್ದುದರಿಂದ ಇವು ಜಗತ್ತಿನಲ್ಲಿ ಬದುಕಿ ಬಾಳಿ ಉಳಿದವು.

ಸರೀಸೃಪಗಳಿಗೂ ಸಸ್ತನಿಗಳಿಗೂ ಕೊಂಡಿಯಂತಿರುವ ಓರ್ವಿ

ಘೋರ ಮತ್ತು ಎಟಿಡೋರ ಎಂಬ ಎರಡು ಜಾತಿಯ ಪ್ರಾಣಿಗಳು ಈಗಲೂ ಇವೆ. ಇವು ತತ್ತಿಯನ್ನಿಡುತ್ತವೆ. ಆದರೆ ಮರಿಗಳು ತಾಯಿಯ ಹಾಲಿನಿಂದ ಜೀವಿಸುತ್ತವೆ.

ತಮಾಶೆಯ ಮಾತೆಂದರೆ ಮೇಲೆ ಹೇಳಿದ ಪ್ರಾಣಿಗಳಿಗೆ ನಿಜವಾಗಿ ಸ್ತನಗಳಿದ್ದಿರಲಿಲ್ಲ. ಹೊಟ್ಟೆಯ ಬಳಿ ಅವುಗಳ ದೇಹದಿಂದ ಒಂದು ಬಗೆಯ ರಸ ಹೊರಡುತ್ತಿತ್ತು. ಇದನ್ನೇ ಹೀರಿ ಮರಿಗಳು ಬದುಕಿ ಉಳಿಯುತ್ತಿದ್ದವು. ಈ ಅವಯವಗಳ ಪ್ರಾಮುಖ್ಯತೆಯನ್ನು ಕಂಡು ನಿಸರ್ಗ ಅವುಗಳನ್ನು ಮೊಲೆಗಳಲ್ಲಿ ರೂಪಾಂತರಿಸಿತು.



ಕೂದಲುಳ್ಳ ಮೆಮಥ. ಆನೆಯನ್ನು ಹೋಲುವ ಪ್ರಾಣಿ.

ಆಗಿನ ಕಾಲದಲ್ಲಿ ಬದುಕಿದ್ದ ಕೆಲವು ಪ್ರಾಣಿಗಳು ಈಗಿಲ್ಲ. ಆನೆಯನ್ನು ಹೋಲುವ ಆದರೆ ಅದಕ್ಕಿಂತಲೂ ದೊಡ್ಡದಾದ 'ಮೆಮಥ' ಎಂಬ ಪ್ರಾಣಿ ಈಗ ಕಾಣಲು ಸಿಗುವದಿಲ್ಲ. ಈ ಪ್ರಾಣಿಗೆ ಆನೆಯಂತೆ ಸೊಂಡಿಲು ಇದ್ದು ಅಂಕುಡೊಂಕಾದ ಕೋರೆಗಳಿದ್ದವು. ದಿನಗಳು

ಉರುಳಿದವು. ವರ್ಷಗಳ ಮೇಲೆ ವರ್ಷಗಳು ಉರುಳಿದವು. ಸಸ್ತನಿಗಳಲ್ಲಿಯ ಒಂದು ಜಾತಿ ಹೆಚ್ಚು ಬೆಳಕಿಗೆ ಬಂದಿತು. ಈ ಪ್ರಾಣಿಯು ಬುದ್ಧಿವತ್ತೆ ಉಳಿದ ಎಲ್ಲ ಪ್ರಾಣಿಗಳಿಗಿಂತಲೂ ಹೆಚ್ಚಿನದಾಗಿತ್ತು. ಮುಂಗಾಲುಗಳಿಂದ ಅದು ಆಹಾರವನ್ನು ಹಿಡಿಯುತಿತ್ತು. ಮರದಿಂದ ಮರಕ್ಕೆ ಹಾರಾಡುತಿತ್ತು. ಸಾಧ್ಯವಾದಾಗ, ಬಿಡುವಾದಾಗಲೆಲ್ಲ ಹಿಂಗಾಲುಗಳ ಮೇಲೆ ನಿಲ್ಲಲು ಯತ್ನಿಸುತಿತ್ತು. ಸಕುಟುಂಬ ಸಪರಿವಾರ ಹಣ್ಣು ಹಂಪಲುಗಳ ಅಡವಿಯ ಮೇಲೆ ದಾಳಿ ಇಡುತಿತ್ತು. ಸೂರೆಗೊಳ್ಳುತ್ತಿತ್ತು.



ಮರದಿಂದ ಮರಕ್ಕೆ ಹಾರಾಡುವ ಮಂಗ.

ಈ ಪ್ರಾಣಿ ಯಾವದೆಂದು ಬಲ್ಲಿರಾ ? ಒಂದಲ್ಲ, ಒಂದು ಬಾರಿ ಎಲ್ಲರ ಕುತೂಹಲ ಕೆರಳಿಸಿದ ಮಂಗ.

4

ನಾವು ಪ್ರತಿದಿನ ಕಾಣುವ ಮಂಗಗಳಲ್ಲಿ ಅನೇಕ ಭೇದಗಳಿವೆ. ಒಂದು ಕಪ್ಪುಮೋರೆಯ ಉದ್ದವಾದ ಬಾಲದ ಮಂಗವಾದರೆ ಇನ್ನೊಂದು ಕೆಂಪು ಮೋರೆಯದು. ಇದೇ ರೀತಿ ಬಾಲವಿಲ್ಲದ ಮಂಗಗಳೂ ಇವೆ. ಜಿಬ್ರಾಲ್ಟರದ ಬಳಿ ಬಾರ್ಬರಿ ಹೆಸರಿನ ಮಂಗಗಳಿವೆ. ಇವುಗಳಿಗೆ ಬಾಲವೇ ಇಲ್ಲ. ಇವು ಆಕೃತಿಯಲ್ಲಿ, ಬುದ್ಧಿಮತ್ತೆಯಲ್ಲಿ ಶ್ರೇಷ್ಠವಾದವು. ಮೇಲೆ ಹೇಳಿದ ಮಂಗಗಳು ಚಿಕ್ಕವು; ಬುದ್ಧಿಮತ್ತೆ ಕಡಿಮೆ.

ಹಿಂದಿನ ಮಂಗಗಳು ಮಾನವ ಸದೃಶ ಮಂಗಗಳು. ಬಹುಮಟ್ಟಿಗೆ ಮನುಷ್ಯನನ್ನು ಹೋಲುತ್ತವೆ.

ಮಂಗಗಳು ಬಾಲದ ಉಪಯೋಗವನ್ನು ತುಂಬ ಚೆನ್ನಾಗಿ ಮಾಡಿಕೊಳ್ಳುತ್ತವೆ. ಮರದಿಂದ ಮರಕ್ಕೆ ಹಾರುವಾಗ, ಅವುಗಳಿಗೆ ತೂಕ ತಪ್ಪುವದು ಸಹಜ. ಆಗ ಬಾಲ ಕ್ಷೋಲಿ ಹೋಗುವದನ್ನು ತಪ್ಪಿಸುತ್ತದೆ.

ಮನುಷ್ಯರ ಮೂಲವನ್ನು ವಿಜ್ಞಾನಿಗಳು ಸಾಧಾರಣವಾಗಿ ಗೊತ್ತುಹಚ್ಚಿದ್ದಾರೆ. ಹಿಂದೆ 'ಟಾರಸಿ ಆಯ್ಡ' ಎಂಬ ಜಾತಿಯ ಚಿಕ್ಕ ಪ್ರಾಣಿ ಇತ್ತು. ಇದೇ ಪ್ರಾಣಿಯಿಂದ ಸಾಮಾನ್ಯ ಮಂಗಗಳ ಒಂದು ಶಾಖೆ ಹುಟ್ಟಿತು. ಮುಂದೆ 10 ಲಕ್ಷ ವರುಷಗಳ ಅವಧಿಯಲ್ಲಿ ಈ ವಿಕಾಸ ಮುಂದುವರಿದು ಕಾಡುಮನುಷ್ಯ ಕಾಣಿಸಿಕೊಂಡ. ಅದರಿಂದ ಸಾಮಾನ್ಯ ಮನುಷ್ಯನನ್ನು ಗುರುತಿಸುವದಕ್ಕೆ 5 ಲಕ್ಷ ವರುಷಗಳು ಬೇಕಾದವು. ಇಲ್ಲಿ ಕೆಳಗೆ ಕೊಟ್ಟ ವಿವರದಿಂದ ಸರಿಯಾಗಿ ಕಲ್ಪನೆ ಬರಬಹುದು.




ಚಿಂಪಾಂಝಿ, ಗೋರಿಲ್ಲಾ, ಗಿಬ್ಬನ್ ಇವು ಕಾಡುಮನುಷ್ಯನನ್ನು ತುಂಬಾ ಹೋಲುತ್ತವೆ.

ಮಂಗನಿಂದ ಮಾನವನಾದ ಎಂದಾಗ ಬಾಲದ ಪ್ರಶ್ನೆ ಬರುತ್ತದೆ. ನಾವು ದಿನವೂ ನೋಡುವ ಮಂಗಗಳಿಗೆ ಉದ್ದವಾದ ಬಾಲವಿದೆ. ಆದರೆ ಪ್ರಾಣಿಸಂಗ್ರಹಾಲಯದಲ್ಲಿ ಇದ್ದ ಕೆಲವು ಮಂಗಗಳನ್ನು ನೋಡಿ. ಅವು ಗಳಲ್ಲಿ ಕೆಲವು ಎರಡು ಕಾಲುಗಳ ಮೇಲೆ ನಡೆಯಬಲ್ಲವು. ಕೈಯಿಂದ ಬಾಳೆಹಣ್ಣನ್ನು ಸುಲಿಯಬಲ್ಲವು. ಇವುಗಳಿಗೆ ಬಾಲ ತೀರ ಚಿಕ್ಕದು. ನಡೆದಾಡುವದು ಪ್ರಾರಂಭವಾದಕೂಡಲೇ ಬಾಲದ ಉದ್ದ ಕಡಿಮೆ ಯಾಗುತ್ತ ಬಂದಿರಬೇಕು. ಕೂಡ್ರುವದು ಅಭ್ಯಾಸ ಉಂಟಾದ ಮೇಲಂತೂ ಕೆಲವಕ್ಕೆ ಮಾಯವೇ ಆಗಿಬಿಟ್ಟಿತು. ಆ ಬಾಲದ ಅವಶೇಷ ಇನ್ನೂ ನಮ್ಮ ನಿಮ್ಮಲ್ಲಿದೆ. ಈಗ ಉಳಿದಿರುವದು ಬರೀ ಎಲುವು ಮಾತ್ರ.

ಸಾವಧಾನದಿಂದ ನಡೆಯತೊಡಗಿದ ಮೇಲೆ ಮನುಷ್ಯ ತೂಕ ತಪ್ಪ ದಂತೆ ಕೈಬೀಸತೊಡಗಿದ. ನಾಲ್ಕು ಕಾಲುಗಳಿಂದ ಜಿಗಿಯುವಾಗ, ಮರದಿಂದ ಮರಕ್ಕೆ ಹಾರಾಡುವಾಗ ಯಾವರೀತಿ ಶರೀರದ ರಚನೆ ಇತ್ತೋ ಅದು ಕಾಲಾಂತರದಲ್ಲಿ ಬದಲಾವಣೆಯಾಗುತ್ತ ಬಂದಿತು. ಕಣ್ಣುಗಳು ಚುರುಕಾದವು. ಯಾವದನ್ನು ಮನಸ್ಸಿನಲ್ಲಿ ಇಟ್ಟುಕೊಳ್ಳದೇ ಬರೀ ಪಿಳಿ ಪಿಳಿ ಕಣ್ಣುಬಿಡುವದನ್ನು ಬಿಟ್ಟು ನಿಧಾನವಾಗಿ ಸುತ್ತಲೂ ಆತ ನೋಡ

ತೊಡಗಿದ. ಆತನಲ್ಲಿ ಕುತೂಹಲ ಕೆರಳತೊಡಗಿತು. ನೋಡಿದ್ದೆಲ್ಲ ಅರಿಯಬೇಕು ಎಂದು ಆಸೆಯಾಯಿತು. ಮೆದುಳಿನ ವಿಕಾಸವಾಗತೊಡಗಿತು. ಒಮ್ಮೆ ನೋಡಿದ್ದನ್ನು ತಿರುಗಿ ಮರೆಯಲಿಲ್ಲ. ಇದೇ ರೀತಿ ಸ್ಪರ್ಶ ಜ್ಞಾನ ಬೆಳೆಯಿತು. ಜೀವನ ಎಲ್ಲ ದೃಷ್ಟಿಯಿಂದಲೂ ಪರಿವರ್ತನವಾಗುತ್ತ ಬಂದಿತು.

ಈ ಪರಿವರ್ತನೆಗಳು ಯುಗಯುಗಗಳಲ್ಲಿ ನಡೆಯಿತು. ಮುಂಗ ಒಂದೊಂದೆ ಹೆಜ್ಜೆಹಾಕುತ್ತ ವನಮಾನವನಾಗಿ ಮನುಷ್ಯನಾದ.

ವನಮಾನವ ಮತ್ತು ಮನುಷ್ಯರಲ್ಲಿಯ ಸಾಮ್ಯ ಕಾಲ್ಪನಿಕವಲ್ಲ ವೆಂದು ಈ ಮೊದಲೇ ಹೇಳಿದ್ದೇನೆ. ಗೋರಿಲ್ಲಾ ಹಾಗೂ ಮನುಷ್ಯನ ತಲೆ ಬುರುಡೆಗಳಲ್ಲಿ ತುಂಬ ಸಾಮ್ಯವಿದೆ. ಮಾನವ ವಿಚಾರಶೀಲ ಪ್ರಾಣಿ. ಮನುಷ್ಯನಲ್ಲಿ ಮಿದುಳಿನ ಬೆಳವಣಿಗೆ ಇಲ್ಲದಿದ್ದರೆ ಉಳಿದ ಪ್ರಾಣಿಗಳಿಂದ ಆತ ಬದುಕಿರುವದು ಸಾಧ್ಯವಿರಲಿಲ್ಲ. ನಾಶವಾದ ಅನೇಕ ಸರೀಸೃಪ ಗಳಂತೆ ಆತ ಕೂಡ ಬರೀ ಕುರುಹಿನ ರೂಪದಲ್ಲಿರುತ್ತಿದ್ದ.

ಮನುಷ್ಯರನ್ನು ನಾವು ಜಗತ್ತಿನ ತುಂಬೆಲ್ಲ ಕಾಣುತ್ತೇವೆ. ಭಾರತ ದಲ್ಲಿ, ಚೀನದಲ್ಲಿ, ಅಮೇರಿಕಾದಲ್ಲಿ, ಎಲ್ಲೆಲ್ಲೂ. ಆದರೆ ಕಾಡುಮನುಷ್ಯರು ಮಾತ್ರ ಆಫ್ರಿಕೆಯ ಕೆಲವು ಕಾಡುಗಳಲ್ಲಿ ಜಾವಾ ಮಲಯಾಗಳ ಅರಣ್ಯ ಗಳಲ್ಲಿ ಮಾತ್ರ ಕಾಣ ಸಿಗುತ್ತಾರೆ. ಹೀಗೇಕೆ ? ಅವರೇಕೆ ಸುಧಾರಿಸಿಲ್ಲ ?

ಹಿಂದೆ ಮನುಷ್ಯ ಮತ್ತು ಕಾಡುಮನುಷ್ಯರ ರೂಪದಲ್ಲಿ, ಬುದ್ಧಿ ಮತ್ತೆಯಲ್ಲಿ ಅಂತರವಿತ್ತು. ಮನುಷ್ಯನ ಬುದ್ಧಿಮತ್ತೆ ಅತಿ ತೀವ್ರವಾಗಿತ್ತು. ಆಹಾರಕ್ಕಾಗಿ ನೀರಿಗಾಗಿ ಆಗಿನ ಕಾಲದ ಮನುಷ್ಯರು ಅಲೆದಲೆದು ಹೊಸ ಹೊಸ ಠಾಣಗಳನ್ನು ಸೇರಿ ಅಲ್ಲಿ ನೆಲೆಸಿದರು. ಇದ್ದ ಸ್ಥಳ ಬಿಟ್ಟ ಕೆಲವು ಗುಂಪುಗಳು ಸುಧಾರಿಸುತ್ತ ನಡೆದವು. ಅಲ್ಲೇ ಇದ್ದುವು ಕಾಡು ಸ್ಥಿತಿ ಯಲ್ಲೇ ಉಳಿದವು.

ಮಾನವನ ವಿಕಾಸದ ಮೇಲೆ ಹೆಚ್ಚಿನ ಬೆಳಕನ್ನು ಬೀರಿದವ ಚಾರ್ಲಸ್ ಡಾರ್ವಿನ್ ಎಂಬ ಮಹಾಶಯ. ಈತ ಮಂಗನಿಂದ ಮಾನವ ಹುಟ್ಟಿದ ಎನ್ನುವ ಸಿದ್ಧಾಂತವನ್ನು ಮಂಡಿಸಲು ತುಂಬ ಪರಿಶ್ರಮ ಪಟ್ಟ. ಧಾರ್ಮಿಕರು, ಮೂಢನಂಬಿಕೆಗಳನ್ನು ನಂಬಿದವರು ಆತನನ್ನು ವಿರೋಧಿಸಿದರು. 'ಮನುಮುನಿಯ ನಾವೆಯ ಕಥೆ ಸುಳ್ಳೇ ಹಾಗಾದರೆ?', 'ನೋವಾ ನಾವೆಯಲ್ಲಿ ಪಶುಪಕ್ಷಿ ಮನುಷ್ಯರ ಒಂದೊಂದು ಜೋಡಿ ಪ್ರಳಯದಿಂದ ಉಳಿಸಿದ್ದು ಸುಳ್ಳೇ? ನಂತರ ಸೃಷ್ಟಿ ಆರಂಭವಾದದ್ದು ಸುಳ್ಳೆ?' ಎಂದು ಡಾರ್ವಿನ್ ಮಹಾಶಯನನ್ನು 'ಅಧರ್ಮಿ' ಎಂದು ಜರಿದರು. ಡಾರ್ವಿನ್‌ನ ಮಾತು ಹಾಸ್ಯಾಸ್ಪದವಾಯಿತು.

ಆದರೆ ಕ್ರಮೇಣ ವಿಜ್ಞಾನಿಗಳ ಲೋಕ ಡಾರ್ವಿನ್‌ನ ವಿಕಾಸವಾದವನ್ನು ಎತ್ತಿಹಿಡಿಯಿತು. ಆತನನ್ನು ತುಂಬ ಜ್ಞಾನಿಯೆಂದು ಸತ್ಕರಿಸಲಾಯಿತು.

ಜಾವಾದಲ್ಲಿ ಸಿಕ್ಕಿದ ತಲೆಬುರುಡೆಯೊಂದರಿಂದ ಮನುಷ್ಯನು ಹಿಂದೆ ಉಳಿದ ಪ್ರಾಣಿಗಳಿಗಿಂತ ತುಂಬ ಸುಧಾರಿಸಿದನೆಂದು ಕಂಡು ಬಂದಿತು. ಆ ತಲೆಬುರುಡೆಯ ವಿಶಿಷ್ಟ ಆಕಾರದಿಂದ, ಅದು ಅರ್ಧ ಮಾನವನ (ಮನುಷ್ಯ ಮಂಗಗಳ ನಡುವಿನ)ದು ಇರಬೇಕೆಂದು ತರ್ಕಿಸಲಾಯಿತು. ಅರ್ಧಮಾನವ, ನಡೆದಾಡುವ ಮಂಗಗಳಿಗಿಂತ ಕೊಂಚ ಎತ್ತರವಾಗಿ ಬೆನ್ನನ್ನು ಹೆಚ್ಚು ಬಾಗಿಸದೇ ನಡೆಯುತ್ತಿದ್ದನು ಎಂದು ವಿಜ್ಞಾನಿಗಳು ಭಾವಿಸುತ್ತಾರೆ; ಈ ಜಾತಿಯನ್ನು 'ಪಿಥಿಕೆಂಥ್ರೊಪಸ್' ಎಂದು ನಾಮಕರಣ ಮಾಡಿದರು. ಆಗಿನ ಕಾಲದ ಕೆಲವು ಶಿಲಾಯುಧಗಳಿಂದ ಆತ ಆಹಾರಕ್ಕಾಗಿ ಬೇಟೆಯಾಡುತ್ತಿದ್ದನೆಂದೂ ನಂಬಲಾಗಿದೆ.

ಅನೇಕ ಶತಮಾನಗಳ ನಂತರ ಪಿಥಿಕೆಂಥ್ರೊಪಸ್ ವಿಕಾಸ ಹೊಂದಿ ಹೊಸದೊಂದು ಅಸ್ತಿತ್ವದಲ್ಲಿ ಬಂದಿತು. ಅದು ಬಳಸುವ ಶಿಲಾ



ಅರ್ಧಮಾನವ—ಈತನ ತಲೆಯ ಆಕಾರ, ದವಡೆ ಇವು ಗೋರಿಲ್ಲಾದ ಹಾಗೂ ಮಾನವನ ತಲೆಯ ಆಕಾರವನ್ನೂ, ದವಡೆಯನ್ನೂ ಹೋಲುತ್ತದೆ.

ಯುಧದಲ್ಲಿಯೂ ಕೊಂಚ ಸುಧಾರಣೆಯಾಯಿತು. ಅವು ಚೂಪಾದವು. ನಯವಾದವು; ವಿವಿಧ ಆಕಾರದ್ದಾದವು. ಇವುಗಳನ್ನು ಬಳಸುತ್ತಿದ್ದ ಪಿಥಿಕೆಂಥ್ರೋಪಸ್‌ದಿಂದ ವಿಕಾಸಹೊಂದಿದ ಈ ಪ್ರಾಣಿಯನ್ನು ಹಿಡಲ್‌ಬರ್ಗ ಮಾನವನೆಂದು ವಿಜ್ಞಾನಿಗಳು ನಾಮಕರಣ ಮಾಡಿದ್ದಾರೆ.

ನಂತರ ಮಗದೊಂದು ಪ್ರಾಣಿ ಕಾಣಿಸಿಕೊಂಡಿತು ಈ ಭೂಮಿಯ ಮೇಲೆ. ಅದು ತನ್ನ ಪೂರ್ವಜರಂತೆ ಹಣ್ಣು ಹಂಪಲಗಳನ್ನು ತಿನ್ನುತ್ತಿತ್ತು. ಮಾಂಸವನ್ನು ಭಕ್ಷಿಸುತ್ತಿತ್ತು. ಆದರೆ ಇದರ ಬುದ್ಧಿ ಹೆಚ್ಚು ಚುರುಕಾಗಿತ್ತು. ದಟ್ಟಡವಿಯಲ್ಲಿ ಮರಕ್ಕೆ ಮರತಿಕ್ಕಿ ಉಂಟಾಗುವ ಬೆಂಕಿಯನ್ನು ಕುರಿತು ಯೋಚಿಸಿತು. ಬೆಂಕಿಯನ್ನು ನೋಡಿ ಭಯಪಡುವ ಈ ಪ್ರಾಣಿ ಅದನ್ನು ಎದುರಿಸುವ ಬಗೆಯನ್ನು ಯೋಚಿಸಿತು. ಕಲ್ಲಿಗೆ



ಹಿಂದೆ ಮಾನವ ಬಳಸಿದ ಆಯುಧಗಳು

ಕಲ್ಲನ್ನು ಉಜ್ಜಿ ಬೆಂಕಿಮಾಡುವದನ್ನು ಇದು ಬಹುಬೇಗ ಹುಡುಕಿಕೊಂಡಿತು. 'ಬೆಂಕಿಗೆ ಚಳಿ ಹೆದರುತ್ತದೆ' ಎಂಬುವನ್ನು ನಿರ್ಧರಿಸಿ ತನ್ನ ವಾಸಸ್ಥಾನವನ್ನು ಬೆಚ್ಚಗೆ ಇರಿಸಿಕೊಳ್ಳತೊಡಗಿತು. ಈ ಪ್ರಾಣಿ ಮೈಮುಚ್ಚಿಕೊಳ್ಳುವದಕ್ಕೆ ಮರದ ತೊಗಟೆ ಸೊಂಟದ ಸುತ್ತಲೂ ಸುತ್ತಿಕೊಳ್ಳುತ್ತಿತ್ತು.

ಮನುಷ್ಯ ವಿಕಾಸಹೊಂದಿದಂತೆ ಪ್ರಾಣಿಗಳೂ ಕಾಲಕ್ಕೆ ತಕ್ಕಂತೆ ಹೆಜ್ಜೆಹಾಕುತ್ತ ಬಂದವು.

ಈಗಿನ ಮತ್ತು ಆಗಿನ ಹವಾಮಾನದಲ್ಲಿ ಸಹ ತುಂಬ ಅಂತರವಿತ್ತು. ಉದಾಹರಣೆಗಾಗಿ ಆಗ, ಈಗ ನಾವು ಗುರುತಿಸುವ ಯುರೋಪ ಖಂಡದ ಮುಕ್ಕಾಲು ಭಾಗ ಹಿಮದಿಂದ ಮುಚ್ಚಿತ್ತು. ನಿಮ್ಮ ನಕಾಶ ಪುಸ್ತಕ ಕೊಂಚ ತೆರೆದು ಇಂದಿನ ಜಗತ್ತಿನ ನಕಾಶೆಯ ಕಡೆಗೆ ದೃಷ್ಟಿ ಹಾಯಿಸಿ ನೋಡಿ. ಇಂಗ್ಲಂಡ, ಫ್ರಾನ್ಸ ದೇಶಗಳ ನಡುವೆ ಕಾಣುವ ಸಮುದ್ರ ಆಗ ಇದ್ದಿರಲಿಲ್ಲ. ಭೂಮಧ್ಯ ಸಮುದ್ರ ಕಪ್ಪು ಸಮುದ್ರಗಳು ಆಗ ಕೇವಲ ಕೊಳ್ಳಗಳಾಗಿದ್ದವು. ಉತ್ತರ ಆಫ್ರಿಕೆಯಲ್ಲಿ ಸಮಶೀತೋಷ್ಣ ಹವಾಮಾನವಿತ್ತು. ಅಲ್ಲಿ ಆದಿಮಾನವರು ವಾಸಿಸುತ್ತಿದ್ದರು. ದಕ್ಷಿಣ ಯುರೋಪದ ಭಾಗದಲ್ಲಿ ಮೃಗಗಳು ತಿರುಗಾಡುತ್ತಿದ್ದವು. ಈ ಪರಿಸ್ಥಿತಿಯಲ್ಲಿ ವಾಸಿಸುತ್ತಿದ್ದ ಮಾನವರಿಗೆ 'ನಿಂದರ ಥೆಲರ್' ಎಂದು ಪಂಡಿತರು ನಾಮಕರಣ ಮಾಡಿದ್ದಾರೆ.

## 5

ಪ್ರಥಮ ಮಾನವ ಪ್ರಾಣಿಯ ಬಗೆಗೆ ಖಚಿತವಾದ ಅಭಿಪ್ರಾಯಗಳು ಇನ್ನೂ ಇಲ್ಲ. ಆಗಿನ ಕಾಲದ ಭೌಗೋಲಿಕ ಸ್ಥಿತಿಗತಿಗಳ ಅರಿವು ನಮಗೆ ಸರಿಯಾಗಿ ಇಲ್ಲದಿರುವದೇ ಇದಕ್ಕೆ ಕಾರಣವಾಗಿದೆ. ಒಂದು ಮಾತನ್ನು ಮಾತ್ರ ಇಲ್ಲಿ ನಿಶ್ಚಿತವಾಗಿ ಹೇಳಬಹುದು. ಅಮೇರಿಕೆಯಲ್ಲಿ ಈ ವರೆಗೆ ಕೆಲವು ಹಲ್ಲುಗಳೂ ಎಲವುಗಳೂ ಮಾತ್ರ ಸಿಕ್ಕಿರುವದರಿಂದ ಆ ದೇಶದಲ್ಲಿ ಹಿಂದೆ ಮಾನವಪ್ರಾಣಿಯ ಅಸ್ತಿತ್ವ ಇದ್ದಿರಲಿಕ್ಕಿಲ್ಲ ಎಂದು ಕೆಲವು ಪಂಡಿತರು ಭಾವಿಸುತ್ತಾರೆ.

ಆದಿ ಮಾನವ ತನ್ನ ಪೂರ್ವಜರಂತೆ ಇತರ ಪ್ರಾಣಿಗಳಂತೆ ಬೇಟೆಯಾಡುತ್ತಿದ್ದ, ಬೇಟೆಯಾಡುವಾಗ ಜೊತೆಗಾರರ ಸಹಕಾರ ಯಾಚಿಸುತ್ತಿದ್ದ. ಚೂಪಾದ ಕಲ್ಲುಗಳನ್ನು ಬೀಸುತ್ತಿದ್ದ. ಮರೆಯಲ್ಲಿ ನಿಂತು ಭರ್ಚಿ

ಗಳಿಂದ ಇರಿದು ಪ್ರಾಣಿಗಳನ್ನು ಕೊಲ್ಲುತ್ತಿದ್ದ. ಶತಮಾನಗಳು ಉರುಳಿದವು. ಆತನ ಬೇಟೆಯ ಪದ್ಧತಿಯಲ್ಲಿ ಸುಧಾರಣೆಯಾಯಿತು. ಮರದ ಜೊಂಗೆ ಬಗ್ಗಿಸಿ ಪ್ರಾಣಿಯ ತೊಗಲನ್ನು ಹರಿದು ದಾರಮಾಡಿ ಅದಕ್ಕೆ ಕಟ್ಟಿ ಬಿಲ್ಲು ತಯಾರಿಸಿದ. ಜೊತೆಗೊಂದು ಬಾಣವು ತಯಾರಾಯಿತು. ದೂರ ಕುಳಿತು ಬಾಣ ಎಸೆದು ಪ್ರಾಣಿಗಳನ್ನು ಕೊಲ್ಲಲು ಆರಂಭಿಸಿದ. ಈಗಲೂ ಆಫ್ರಿಕೆಯ ಕೆಲವು ಪ್ರದೇಶಗಳಲ್ಲಿ ಮೇಲೆ ಹೇಳಿದ ಜನರ ಸಂಬಂಧಿಕರು ವಾಸಿಸುವರು. ಇವರಿಗೆ ‘ ಬುಶ್‌ಮೆನ್ ’ ಎಂಬ ಹೆಸರು.

ಪ್ರಾರಂಭದಲ್ಲಿ ಮನುಷ್ಯರಿಗೆ ವಾಸಿಸಲು ಸರಿಯಾದ ಸ್ಥಳವಿಲ್ಲದಿದ್ದುದರಿಂದ ಗುಹೆಗಳಲ್ಲಿ ವಾಸಿಸಬೇಕಾಗಿತ್ತು. ನೈಸರ್ಗಿಕವಾದ ಗುಹೆಗಳು ಅವರಿಗೆ ಮಳೆಗಾಳಿಗಳಿಂದ ಕಾಡುಪ್ರಾಣಿಗಳಿಂದ ರಕ್ಷಿಸಿದವು.

ಮನುಷ್ಯರು ಸುಮಾರು 4 ಲಕ್ಷಗಳಿಂದ ಈಚೆ ಈ ಭೂಮಿಯಲ್ಲಿ ಕಂಡುಬಂದರೆಂದು ನಿಶ್ಚಯಿಸಲಾಗಿದೆ. ಗುಹೆಗಳಲ್ಲಿ ದೊರಕಿದ ವಸ್ತುಗಳಿಂದ ಕ್ರಿ. ಶ. ಪೂರ್ವ ಲಕ್ಷ ವರ್ಷಗಳ ಮೊದಲು ನಿಶ್ಚಿತವಾಗಿ ಇದ್ದ ಗುರುತು ಕಾಣುತ್ತದೆ.

100 ಸಾವಿರ ವರುಷಗಳ ಹಿಂದೆ ಇದ್ದ ಮನುಷ್ಯನು ನಮ್ಮಂತೆ ಇದ್ದಿರಲಿಲ್ಲ. ಅವನು ಗಿಡ್ಡಾಗಿ, ಗಟ್ಟಿಯಾಗಿದ್ದ. ಕಾಲುಗಳು ದಪ್ಪವಾಗಿ ದಷ್ಟಪುಷ್ಟವಾಗಿದ್ದವು. ಕೈಗಳು ದಪ್ಪವಾಗಿದ್ದವು. ಮೈಮೇಲೆ ಕೂದಲು ತುಂಬಿದ್ದವು. ಕಲ್ಲಿನ ಕೊಡಲಿ ಹಾಗೂ ಕತ್ತಿಗಳೂ ಆತನ ಆಯುಧಗಳಾಗಿದ್ದವು. ಗುಹೆಗಳನ್ನು ಬೆಂಕಿಯಂಥ ಬೆಚ್ಚಗೆ ಮಾಡಿಕೊಳ್ಳುವದಕ್ಕೆ ಆತ ಮಾತ್ರ ಕಲಿತಿದ್ದ. ಮಾತನಾಡಲು ಕಲಿಯುತ್ತಿದ್ದ.

ಇರಾಕದಲ್ಲಿ ದೊರೆತ ಅವಶೇಷಗಳು ಮಾನವ ವಿಕಾಸದ ಮೇಲೆ ತುಂಬ ಬೆಳಕನ್ನು ಬೀರಿದೆ. ಶಿಲಾಯುಗದಿಂದ ಇಂದಿನ ವರೆಗೆ ಆದ ವಿಕಾಸದ ಸೃಷ್ಟಿ ಕಲ್ಪಿಸಿ ಇಲ್ಲಿ ಕಾಣ ಸಿಗುತ್ತದೆ. 100 ಸಾವಿರ ವರುಷಗಳಿಂದಲೂ ಇಲ್ಲಿ ಮನುಷ್ಯ ವಾಸಿಸಿದ ಗುರ್ತುಗಳು ಸ್ಪಷ್ಟವಾಗಿವೆ.

ಇಲ್ಲಿ ಹಿಂದೆ ವಾಸಿಸಿದವರು ಸರಿಯಾಗಿ ತಮ್ಮ ವಸ್ತುಗಳನ್ನು ಇರಿಸಿ ಕೊಳ್ಳುತ್ತಿರಲಿಲ್ಲವೆಂದು ತೋರುತ್ತದೆ. ಈ ಅವ್ಯವಸ್ಥೆ ಇಂದಿನ ವೈಜ್ಞಾನಿಕರಿಗೆ ಹೆಚ್ಚಿನ ಸಹಾಯ ಮಾಡಿತು. ನಿರುಪಯುಕ್ತ ವಸ್ತುಗಳನ್ನು ಅವರು ಥರ ಥರವಾಗಿ ಮಣ್ಣಿನಲ್ಲಿ ಹುಗಿದುದರಿಂದ ಮನುಷ್ಯನ ಬುದ್ಧಿ ವಿಕಾಸದ ಸ್ಪಷ್ಟಕಲ್ಪನೆ ಬರುವವಕ್ಕೆ ಸಹಾಯವಾಯಿತು. ಮಣ್ಣಿನ ಥರಗಳಲ್ಲಿ ಕಾಣುವ ಅಚ್ಚುಗಳು ಭೂಮಿಯ ಥರಗಳಲ್ಲಿ ಕಂಡ ವಸ್ತುಗಳು ಜಗತ್ತನ್ನೇ ಬೆರಗುಗೊಳಿಸಿವೆ.

ಮೇಲಿನ ಥರದಲ್ಲಿ ದೊರೆತ ವಸ್ತುಗಳು ಐದು ಸಾವಿರ ವರ್ಷಗಳ ಈಚಿನದಾಗಿದ್ದವು. ಅಲ್ಲಿ ದೊರೆತ ಗಡಿಗೆ, ಬೀಸುವ ಕಲ್ಲುಗಳು, ಸಾಕುವ ಪ್ರಾಣಿಗಳ ಎಲುವುಗಳಿಂದ ಮನುಷ್ಯನು ಬೆಳೆಗಳನ್ನು ಬೆಳಿಸುವಕ್ಕೆ ಯತ್ನಿಸಿದ್ದನೆಂದು ಕಂಡುಬರುತ್ತದೆ. ದನ ಕುರಿಗಳನ್ನು ಬೆಳಿಸಿದ್ದು ಕಾಣುತ್ತದೆ.

ಕೆಳಗಿನ ಥರದಲ್ಲಿ ದೊರೆತ ಅವಶೇಷಗಳು 12 ಸಾವಿರ ವರುಷಗಳ ಹಿಂದಿನವು. ಬೇಸಾಯಗಳಾಗಲೀ ಪ್ರಾಣಿಗಳನ್ನು ಸಾಕುವದನ್ನಾಗಲೀ ಮನುಷ್ಯ ಅರಿತಿದ್ದು ಕಂಡುಬರುವದಿಲ್ಲ. ಮೂರನೇ ಥರದಲ್ಲಿ ದೊರೆತ ಅವಶೇಷಗಳು ಕ್ರಿ. ಶ. ಪೂರ್ವ 40 ಸಾವಿರ ವರ್ಷಗಳ ಹಿಂದಿನವು. ಆಗ ಸುಮಾರು 30 ಸಾವಿರ ವರ್ಷಗಳ ವರೆಗೆ ಮಾನವನ ವಿಕಾಸ ಬಹು ನಿಧಾನವಾಗಿರಬೇಕು.

ಕೊನೆಯ ಹಾಗೂ ನಾಲ್ಕನೆಯ ಥರದಲ್ಲಿ ಅತಿ ಪೂರ್ವದಲ್ಲಿ ಮನುಷ್ಯನು ಗುರುತನ್ನು ಪ್ರಯಾಸದಿಂದ ಕಾಣಬಹುದಾಗಿದೆ.

ಸ್ಪೇನದಲ್ಲಿ ಕಂಡುಬಂದ ಶಿಲಾಯುಗದ ಚಿತ್ರಗಳು ಜಗತ್ತಿನ ವಿಜ್ಞಾನಿಗಳಿಗೆ ಇನ್ನು ಒಂದು ಸಮಸ್ಯೆಯಾಗಿದೆ. 100ವರ್ಷಗಳ ಹಿಂದೆ ವಿಜ್ಞಾನಿಯೊಬ್ಬ ಗುಹೆಯೊಂದರಲ್ಲಿ ದೊರೆತ ಅವಶೇಷಗಳನ್ನು ಪರೀಕ್ಷಿಸುತ್ತಿದ್ದ, ಮೇಣಬತ್ತಿಯ ಬೆಳಕಿನಲ್ಲಿ. ಗುಹೆಯ ಮೇಲ್ಭಾಗದಲ್ಲಿ ಕಂಡುಬಂದ ಚಿತ್ರಗಳನ್ನು ಕಂಡು ಶಾಸ್ತ್ರಜ್ಞನ ಮಗಳು ದಿಗ್ಭ್ರಾಂತಳಾಗಿ

ಕೂಗಿಕೊಂಡಳು. ಅವಳ ತಂದೆ ಓಡಿಬಂದ. ಹೋರಿಸ ಚಿತ್ರಗಳನ್ನು ಕಂಡ. ಆಶ್ಚರ್ಯದಿಂದ ಮೂಕನಾದ.

ಆ ಚಿತ್ರಗಳನ್ನು ಯಾರು ಕೊರೆದಿರಬಹುದು? ಏಕೆ ಅವುಗಳನ್ನು ಕೊರೆದರು! ಅವುಗಳನ್ನು ಕೊರೆಯುವಾಗ ಬೆಳಕೆಲ್ಲಿಂದ ಬಂದಿತು? ಇದು ಎಲ್ಲರಿಗೂ ಒಂದು ಸಮಸ್ಯೆಯಾಗಿದೆ. ಆ ಚಿತ್ರಗಳು ಸುಮಾರು 25 ಸಾವಿರ ವರ್ಷಗಳ ಹಿಂದಿನ ಶಿಲಾಯುಗದ ಕಾಲದವು ಎಂದು ಸ್ವಚ್ಛವಾಗಿ ಹೇಳಬಹುದು. ಅವುಗಳನ್ನು ಕೊರೆದವರು ತುಂಬ ವಿಕಾಸ ಹೊಂದಿದವರು ಎಂಬುದು ನಿಶ್ಚಿತ.



ಆದಿಮಾನವನ ಕಲಾರಾಧನೆ

ಶಿಲಾಯುಗದಲ್ಲಿ ಕೊರೆದ ಚಿತ್ರಗಳಿಂದ ಮನುಷ್ಯನ ಕಲ್ಪನಾ ಶಕ್ತಿ ಬೆಳೆಯುತ್ತಿದ್ದುದು ಕಾಣಬಹುದಾಗಿದೆ. ಶಿಲಾಯುಗದ ಮಾನವ ಸ್ವತಃ ಅನುಭವದಿಂದ ವಿಷಯಗಳನ್ನು ಅರಿತು ಮಾನವ ಸಂಸ್ಕೃತಿಯ ಒಂದೊಂದೇ ಮೆಟ್ಟಲನ್ನು ಏರಿದ. ಮೊದಲು ಮಂಗನಾಗಿ ಕಾಡಿನಲ್ಲಿ ಬೆಳೆದ; ಕಾಡು ಮನುಷ್ಯನಾಗಿ ಗವಿಯಲ್ಲಿ ವಾಸಿಸಿದ; ಮನೆಕಟ್ಟಿದ;



ಮಾನವನ ಮತ್ತೊಂದು ಅವಸ್ಥೆ

ಸಂಸಾರ ಹೂಡಿದ; ನೇಗಿಲು ಹಿಡಿದ; ಹೊಸ ಹೊಸ ಧಾತುಗಳನ್ನು ಹುಡುಕಿದ; ಹೊಸ ಹೊಸ ಶಾಸ್ತ್ರಗಳನ್ನು ಅರಿತ. ಇಜಿಪ್ತದಲ್ಲಿ ನೈಲ ನದಿಯ ಸಂಸ್ಕೃತಿ, ಭಾರತದ ಸಿಂಧುನದಿಯ ಸಂಸ್ಕೃತಿ, ಮೆಸೆಪೊಟೋಮಿಯಾದ ಟೈಗ್ರಿಸ-ಯಫ್ರೆಟಿಸ್ ನದಿಗಳ ಸಂಸ್ಕೃತಿಗಳ ಬಗ್ಗೆ ನೋಡುವಾಗ ಸಾಧಾರಣ 5000 ವರುಷಗಳ ಹಿಂದಿನ ಮಾನವ ಸಂಸ್ಕೃತಿಯ ವಿವಿಧ ರೂಪಗಳು ಕಣ್ಣಿಗೆ ಕಟ್ಟುತ್ತವೆ.

ಹಿಂದಿನ ಯುಗಗಳನ್ನು ನಾವು ಹಳೆಯ ಶಿಲಾಯುಗ, ಹೊಸ ಶಿಲಾಯುಗ, ಕಬ್ಬಿಣಯುಗ, ಎಂಬುದಾಗಿ ಕರೆಯುತ್ತೇವೆ. ಅದರಂತೆ ಇಂದಿನದು ಅಣುಯುಗವಾಗಿದೆ. ಮಾನವ ಮೊದಲು ತಾನು ಈ ಜಗತ್ತಿನಲ್ಲಿ ಶಾಂತವಾಗಿ ಜೀವಿಸಲು ಪ್ರಯತ್ನ ಪಟ್ಟ. ತನ್ನ ಸೌಲಭ್ಯಕ್ಕೆ

ಅನೇಕ ರೀತಿಯ ಶೋಧಗಳನ್ನು ಮಾಡಿದ. ವಿದ್ಯುತ್‌ಶಕ್ತಿಯ ಶೋ
ದಿಂದ ಮನೆ ಮನೆಗಳು ಕಣ್ಣು ಕೋರೈಸುವ ದೀಪಗಳಿಂದ ಬೆಳಗಿದ
ಮನೆಯಲ್ಲಿ ಕುಳಿತು, ನೂರಾರು ಮೈಲು ದೂರದಲ್ಲಿ ಹಾಡಿದ ಹಾಡ
ಆಲಿಸಿದ, ಇದೇ ರೀತಿ ಇನ್ನೆಷ್ಟೋ ಶೋಧಗಳನ್ನು ಮಾಡಿದ.

ಹೊಸ ಶೋಧಗಳ ಪರಂಪರೆ ಮಾನವ ಕುಲವನ್ನೇ ನಾಶಮಾ
ಬಲ್ಲ ಅಸ್ತ್ರಗಳಿಗೆ ಜನ್ಮ ಕೊಟ್ಟಿತು. ಅಣುಬಾಂಬು ಅವುಗಳಲ್ಲೊಂದ
ಜೀವಿಸುವ ಎಲ್ಲ ಪ್ರಾಣಿ ಮತ್ತು ಸಸ್ಯಗಳನ್ನು ಮಾತ್ರ ಕೊಲ್ಲ
ಇನ್ನೊಂದು ರೀತಿಯ "ನ್ಯೂಟ್ರಾನ್" ವಿಕರಣ ಬಾಂಬು ಶೋಧವಾಗಿ
ಯಂತೆ. ಇತ್ತೀಚೆ ಕೃತ್ರಿಮ ಗ್ರಹಗಳನ್ನು ತಯಾರಿಸಿ ಅದರಲ್ಲಿ ಕುಳಿ
ನಾವಿದ್ದ ಪೃಥ್ವಿಯ ಕಡೆ ನೋಡುವ ಆಸೆ ಈ ಮಾನವನಿಗೆ. ಇದು ಅ
ನನ್ನು ಎಲ್ಲಿಗೆ ಎಳಕೊಂಡು ಹೋಗಬಲ್ಲುದೋ !



## ನಿಮಗೆ ಬೇಕಾಗುವ ಪುಸ್ತಕಗಳನ್ನು ನಮ್ಮಲ್ಲಿ ಕೊಳ್ಳಿರಿ

ನಾವು ಮಕ್ಕಳಿಗಾಗಿ ಹೊಸ ಬಗೆಯ ಉಪಯುಕ್ತವಾದ ಪುಸ್ತಕಗಳನ್ನು ಪ್ರಕಟಿಸಬೇಕೆಂದಿದ್ದೇವೆ. ಆ ಕುರಿತು ವಿವರಗಳು ಒಳಗೆ ಇವೆ. ನೀವು ನಮ್ಮಲ್ಲಿ ಪುಸ್ತಕಗಳನ್ನು ಕೊಂಡರೆ ನಮ್ಮ ಈ ಪ್ರಯತ್ನಕ್ಕೆ ಸಹಾಯ ಮಾಡುತ್ತೀರಿ ಎಂದು ನಮ್ಮ ಭಾವನೆ.

ನಮ್ಮಲ್ಲಿ ಕನ್ನಡದ ಹೆಸರಾಂತ ಬರಹಗಾರರ ಪುಸ್ತಕಗಳಿವೆ. ಮಕ್ಕಳ ಪುಸ್ತಕಗಳೂ ಅಪಾರ ಸಂಗ್ರಹದಲ್ಲಿವೆ. ಪುಸ್ತಕಗಳು ಪ್ರಕಟವಾದಂತೆಲ್ಲಾ ಅವುಗಳನ್ನು ತರಿಸಲಾಗುತ್ತದೆ. ವಾಚನಾಲಯದವರಿಗೆ ನೋಡಿ ಆರಿಸುವುದಕ್ಕೆ ಅನುಕೂಲವಾಗುತ್ತದೆ.

ಈ ವಿಳಾಸ ನಿಮ್ಮ ನೆನಪಿನಲ್ಲಿರಲಿ.

**ಸುಲಭ ಸಾಹಿತ್ಯ ಪ್ರಕಾಶನ**

**ಕುಮಟೆ (ಉ.ಕ.)**